


## ಸ್ತೋತ್ರಮಾಲಿಕಾ - ೯

# ತಾರತಮ್ಯಸ್ತೋತ್ರಮಾಲಿಕಾ

















ಡಾ. ವ್ಯಾಸನಕೆರೆ ಪ್ರಭಂಜನಾಚಾರ್ಯ

ಶ್ರೀವ್ಯಾಸಮಧ್ವಸಂಶೋಧನ ಪ್ರತಿಷ್ಠಾನ

# ಶ್ರೀವ್ಯಾಸಮಧ್ವ ಸಂಶೋಧನ ಪ್ರತಿಷ್ಠಾನ (ರಿ.)

'Pajaka'. 89/24. III Cross, Mount Joy Road, Hanumanthanagar, Bangalore - 560 019
Website: www.vyasamadhwa.org Ph:26602802 — Email: info@vyasamadhwa.org

## ಸಂಸ್ಥೆಯ ಪ್ರಮುಖ ಯೋಜನೆಗಳು

1. ಪ್ರಾಚೀನಸಂಸ್ಕೃತ ಹಸ್ತಪ್ರತಿಗ್ರಂಥಗಳನ್ನು ಸಂಗ್ರಹಿಸಿ, ವ್ಯವಸ್ಥಿತವಾಗಿ ಸಂರಕ್ಷಿಸುವುದು; ಈಗಾಗಲೇ 2000ಕ್ಕೂ ಹೆಚ್ಚು ಹಸ್ತಪ್ರತಿಗಳನ್ನು ಸಂಗ್ರಹಿಸಿ, ತನ್ನ 'ಶ್ರೀಜಯತೀರ್ಥ ಸಂಸ್ಕೃತ ಹಸ್ತಲಿಖಿತ ಗ್ರಂಥಾಲಯ'ದಲ್ಲಿ ಸಂರಕ್ಷಿಸುತ್ತಿದೆ.
2. ಶ್ರೀವ್ಯಾಸಮಧ್ವರ ಕೃತಿಗಳ ಅನುವಾದ ಹಾಗೂ ವಿವರಣೆಗಳನ್ನೊಳಗೊಂಡ ಕೃತಿಗಳನ್ನು, ಹರಿದಾಸಸಾಹಿತ್ಯವನ್ನು ಪ್ರಕಾಶನಪಡಿಸುವುದು (ಐತರೇಯಪ್ರಕಾಶನ); ಈಗಾಗಲೇ 40000 ಪುಟಗಳಿಗೂ ಮೀರಿದ ಸಾಹಿತ್ಯವನ್ನು ಸಂಸ್ಕೃತ, ಕನ್ನಡ, ಆಂಗ್ಲ ಹಾಗೂ ತೆಲುಗು ಭಾಷೆಗಳಲ್ಲಿ ಪ್ರಕಾಶನ ಪಡಿಸಲಾಗಿದೆ.
3. 'ಶ್ರೀರಾಘವೇಂದ್ರ ವೇದಾಂತಪಾಠಶಾಲಾ' ಎಂಬ ಸಂಸ್ಥೆಯನ್ನೂ ಪ್ರಾರಂಭಿಸಿ, ಪ್ರತಿನಿತ್ಯ ಸರ್ವ-ಮೂಲಗ್ರಂಥಗಳ ಪಾಠ-ಪ್ರವಚನ, ಸ್ತೋತ್ರಪಾಠ ಇತ್ಯಾದಿಗಳನ್ನು ಅನೇಕ ವರ್ಷಗಳಿಂದ ನಿರಂತರ ನಡೆಸುತ್ತಾ ಬಂದಿದೆ.
4. 'ಶ್ರೀವ್ಯಾಸಮಧ್ವಸೇವಾಪುರಸ್ಕಾರ ಯೋಜನೆ': ಶ್ರೀವ್ಯಾಸಮಧ್ವರ ಸೇವೆ ಸಲ್ಲಿಸಿದ ವೃದ್ಧ ವಿದ್ವಾಂಸರಿಗೆ ಪ್ರತಿತಿಂಗಳು ಮಾಸಿಕ ಗೌರವಧನವನ್ನು ಆಜೀವ ಸಲ್ಲಿಸುವುದು; ಪ್ರಕೃತ 26 ವಿದ್ವಾಂಸರಿಗೆ ರೂ.1500/-ಗಳನ್ನು ಸಲ್ಲಿಸುತ್ತಿದೆ.
5. ಶ್ರೀವ್ಯಾಸಮಧ್ವರ ಕೃತಿಗಳನ್ನು ಅಧ್ಯಯನ ಮಾಡುತ್ತ, ಲೌಕಿಕ ವಿದ್ಯೆಯ ವ್ಯಾಸಂಗ ಮಾಡುತ್ತಿರುವ ಪ್ರತಿಭಾವಂತ ವಿದ್ಯಾರ್ಥಿಗಳಿಗೆ ಆರ್ಥಿಕಸಹಾಯ ನೀಡುವುದು.
6. ಪ್ರತಿವರ್ಷ ಒಬ್ಬ ಶ್ರೇಷ್ಠ ಹಿರಿಯವಿದ್ವಾಂಸರಿಗೆ ರೂ.12,000/-ಗಳ 'ಶ್ರೀವ್ಯಾಸಮಧ್ವಸೇವಾಪ್ರಶಸ್ತಿ'.
7. ಮಹಾಭಾರತತಾತ್ಪರ್ಯನಿರ್ಣಯವನ್ನು ಪೂರ್ಣ ಕಂಠಪಾಠ ಒಪ್ಪಿಸುವ ವಿದ್ಯಾರ್ಥಿಗೆ ರೂ.25,000/- ಪ್ರಶಸ್ತಿ, ಸುಮಧ್ವವಿಜಯವನ್ನು ಒಪ್ಪಿಸುವ ವಿದ್ಯಾರ್ಥಿಗೆ 'ಶ್ರೀಮಧ್ವಪ್ರಿಯ' ಪ್ರಶಸ್ತಿ, ಹಾಗೂ ಹರಿಕಥಾಮೃತಸಾರವನ್ನು ಒಪ್ಪಿಸುವ ವಿದ್ಯಾರ್ಥಿನಿಗೆ 'ದಾಸಪ್ರಿಯ' ಪ್ರಶಸ್ತಿಪ್ರದಾನ.
8. ಶ್ರೀವ್ಯಾಸಮಧ್ವರನ್ನು ಹಾಗೂ ಅವರ ಕೃತಿಗಳನ್ನು ಕುರಿತ ಸಂಶೋಧನ ಕೃತಿಗಳ ಪ್ರಕಾಶನಕ್ಕೆ ಆರ್ಥಿಕಸಹಾಯ.
9. ಯುವಜನತೆಯಲ್ಲಿ ತಾತ್ತ್ವಿಕಜಾಗೃತಿಯನ್ನು ಉಂಟುಮಾಡಲು ಕಾಲಕಾಲಕ್ಕೆ ಶ್ರೀವ್ಯಾಸಮಧ್ವರ ತತ್ತ್ವಗಳ ಬಗ್ಗೆ ಕಾರ್ಯಾಗಾರಗಳನ್ನು, ವಿಚಾರಸಂಕಿರಣಗಳನ್ನು ಮತ್ತು ವಿದ್ವದ್ಗೋಷ್ಠಿಗಳನ್ನು ಏರ್ಪಡಿಸುವುದು.

ಅಪಾರವೆಚ್ಚದ ಈ ಎಲ್ಲ ಯೋಜನೆಗಳಿಗಾಗಿ ಪ್ರತಿಷ್ಠಾನವು ಯಾವುದೇ ರೀತಿಯ ದೇಣಿಗೆಯನ್ನು ಆಸ್ತಿಕಜನತೆಯಿಂದ ಸ್ವಾಗತಿಸುತ್ತದೆ. ರೂ.15,000/- ಹಾಗೂ ಅದಕ್ಕಿಂತ ಹೆಚ್ಚಿನ ಮೊತ್ತದ ದೇಣಿಗೆಯನ್ನು ನೀಡುವವರಿಗೆ ಸರ್ವಮೂಲಗ್ರಂಥಗಳು, ಮಹಾಭಾರತತಾತ್ಪರ್ಯನಿರ್ಣಯ ಹಾಗೂ ಹರಿಕಥಾಮೃತಸಾರಗಳ ಅನುವಾದಗಳು ಸೇರಿದಂತೆ ಪ್ರತಿಷ್ಠಾನದ ಪ್ರಕಾಶನದಲ್ಲಿ ಲಭ್ಯವಿರುವ ಎಲ್ಲಾ ಗ್ರಂಥಗಳನ್ನು ಉಚಿತವಾಗಿ ನೀಡಲಾಗುವುದು.

ವಿ.ಸೂ.:

1. ದೇಣಿಗೆಗಳನ್ನು "ಶ್ರೀವ್ಯಾಸಮಧ್ವಸಂಶೋಧನಪ್ರತಿಷ್ಠಾನ(ರಿ.)" S/B A/c No. 0472101031491, Canara Bank Hanumanthanagar Branch, ಬೆಂಗಳೂರು ಅಥವಾ "Sri Vyasa Madhwa Research Foundation (R), S/B A/c No. 0472101044870, Canara Bank Hanumanthanagar Branch, ಬೆಂಗಳೂರು" - IFSC Code CNRB 0000472 ಈ ಹೆಸರಿಗೆ ನಗದು / ಚೆಕ್ / ಡ್ರಾಫ್ಟ್ ಮೂಲಕ ಸಲ್ಲಿಸಿ ಅಧಿಕೃತ ರಸೀತಿಯನ್ನು ಪಡೆಯತಕ್ಕದ್ದು.
2. ಎಲ್ಲ ಬಗೆಯ ದೇಣಿಗೆಗಳಿಗೂ 80ಜಿ ಅನ್ವಯ ಆದಾಯ ತೆರಿಗೆ ವಿನಾಯಿತಿ ಸೌಲಭ್ಯವಿರುತ್ತದೆ.



# ಸ್ತೋತ್ರಮಾಲಿಕಾ-೯

## (ತಾರತಮ್ಯಸ್ತೋತ್ರಮಾಲಿಕಾ)


ಸಂಕಲನ, ಸಂಪಾದನೆ :

ಡಾ. ವ್ಯಾಸನಕೆರೆ ಪ್ರಭಂಜನಾಚಾರ್ಯ



ಪ್ರಕಾಶನ :

ಐತರೇಯ ಪ್ರಕಾಶನ ವ್ಯಾಸನಕೆರೆ

ಶ್ರೀವ್ಯಾಸಮಧ್ವಸಂಶೋಧನ ಪ್ರತಿಷ್ಠಾನದ ಪ್ರಕಾಶನ ವಿಭಾಗ

'ಪಾಜಕ', ೮೯/೨೪, ೩ನೇ ಮುಖ್ಯರಸ್ತೆ, ಮೌಂಟ್‌ಜಾಯ್ ಎಕ್ಸ್‌ಟೆನ್ಷನ್,

ಹನುಮಂತನಗರ, ಬೆಂಗಳೂರು - ೫೬೦ ೦೧೯.

**Stotramalika (Part -9)** : Compiled by Vidyāvācaspati, Darśanaratnam, Pravacanācārya, Sacchāstravicakṣaṇaratnam, Śāstrapravacanakesari, Madhvamatavardhana, Vidvaccūḍāmaṇi, Vedavidyā vicakṣaṇa, Paṇḍitaratnam, Vidyāvāridhi, Sacchāstrapravacanapravīṇa, Gītāratnākara, Tattvavācaspati, Jnānaratnākara (and Recipient of Karnataka State Sanskrit Award-1999 & Karnataka Rajyotsava Award-2002, Śrī Vidyāmānya Mahāpraśasti of Śrī Pejavar Math, Udupi and Rashtrapati Award - 2005) Dr.Vyasanakere Prabhanjanacharya, M.A., Ph.D., D.Litt., F.I.B.R., F.U.W.A., Principal (Rtd.), Govt. First Grade College, K.R.Puram, Bangalore and Published by Aitareya Prakāśana Vyasanakere, Publication wing of Śrī VyāsaMadhva Samśodhana Pratiṣṭhāna(R), 'Pājaka', No.89/24, Third Cross, Mount Joy Extension, Hanumanthanagar, Bangalore - 560019. Pages: xvi + 352 = 296

Phone : (080) 26611011 ; 26602802.

STOTRAMALIKA - PART - 9

ISBN NO. 978-93-81826-69-0

Internet : www.vyasamadhwa.org

E-mail : info@vyasamadhwa.org



First Edition : 2017

Price : Rs.180/-

Typeset by :
**Śrī Vyāsa Madhva Samśodhana Pratiṣṭhāna(Regd),**

Printed at :
**Vāgartha,** N.R. Colony, Bangalore, Ph: 22427677

# ಸ್ತೋತ್ರಾನುಕ್ರಮಣಿಕಾ


## ೧. ಉಪನಿಷತ್ತುಗಳಲ್ಲಿ ತಾರತಮ್ಯ ೧-೧೩

| | | |
|---|---|---|
| ೧. | ಆನಂದತಾರತಮ್ಯಮೀಮಾಂಸಾ (ತೈತ್ತಿರೀಯೋಪನಿಷತ್) | ೧ |
| ೨. | ಆನಂದತಾರತಮ್ಯಮೀಮಾಂಸಾ (ಬೃಹದಾರಣ್ಯಕೋಪನಿಷತ್) | ೨ |
| ೩. | ದೇವತಾತಾರತಮ್ಯಮ್ (ಐತರೇಯೋಪನಿಷತ್) | ೩ |
| ೪. | ತಾರತಮ್ಯನಿರೂಪಣಮ್ (ಐತರೇಯೋಪನಿಷತ್) | ೪ |
| ೫. | ಛಂದಸ್ತಾರತಮ್ಯಮ್ (ಐತರೇಯೋಪನಿಷತ್) | ೪ |
| ೬. | ಸೃಷ್ಟೌ ದೇವತಾತಾರತಮ್ಯಮ್ (ಐತರೇಯೋಪನಿಷತ್) | ೫ |
| ೭. | ದೇವತಾತಾರತಮ್ಯನಿರೂಪಣಮ್ (ಛಾಂದೋಗ್ಯೋಪನಿಷತ್) | ೫ |
| ೮. | ದೇವತಾತಾರತಮ್ಯನಿರೂಪಣಮ್ (ಬೃಹದಾರಣ್ಯಕೋಪನಿಷತ್) | ೧೨ |
| ೯. | ತತ್ತ್ವತಾರತಮ್ಯಮ್ (ಕಾಠಕೋಪನಿಷತ್) | ೧೩ |
| ೧೦. | ತತ್ತ್ವತಾರತಮ್ಯಮ್ (ಕಾಠಕೋಪನಿಷತ್) | ೧೩ |

## ೨. ಸರ್ವಮೂಲಗಳಲ್ಲಿ ತಾರತಮ್ಯತತ್ತ್ವ ೧೪-೫೫

| | | |
|---|---|---|
| ೧೧. | ಆನಂದತಾರತಮ್ಯಮ್ (ತೈತ್ತಿರೀಯೋಪನಿಷದ್ಭಾಷ್ಯಮ್) | ೧೪ |
| ೧೨. | ತಾರತಮ್ಯಮ್ (ಛಾಂದೋಗ್ಯೋಪನಿಷದ್ಭಾಷ್ಯಮ್) | ೧೫ |
| ೧೩. | ದೇವತತಾರತಮ್ಯಮ್ (ಛಾಂದೋಗ್ಯೋಪನಿಷದ್ಭಾಷ್ಯಮ್) | ೧೫ |
| ೧೪. | ಆನಂದತಾರತಮ್ಯಮ್ (ಐತರೇಯೋಪನಿಷದ್ಭಾಷ್ಯಮ್) | ೧೯ |
| ೧೫. | ತಾರತಮ್ಯನಿರೂಪಣಮ್ (ಐತರೇಯೋಪನಿಷದ್ಭಾಷ್ಯ) | ೨೦ |
| ೧೬. | ಛಂದೋದೇವತಾತಾರತಮ್ಯನಿರೂಪಣಮ್ (ಐತರೇಯೋಪನಿಷದ್ಭಾಷ್ಯ) | ೨೧ |
| ೧೭. | ಸೃಷ್ಟೌ ದೇವತಾತಾರತಮ್ಯನಿರೂಪಣಮ್ (ಐತರೇಯೋಪನಿಷದ್ಭಾಷ್ಯ) | ೨೨ |
| ೧೮. | ದೇವತಾತಾರತಮ್ಯಮ್ (ಐತರೇಯಭಾಷ್ಯ) | ೨೪ |
| ೧೯. | ದೇವಾನಾಮಂಶಾಮತಾರಾದಿ ನಿರೂಪಣಮ್(ಬೃಹದಾರಣ್ಯಕೋಪನಿಷದ್ಭಾಷ್ಯಮ್) | ೨೪ |
| ೨೦. | ದೇವತಾತಾರತಮ್ಯ ನಿರೂಪಣಮ್ (ಬೃಹದಾರಣ್ಯಕೋಪನಿಷದ್ಭಾಷ್ಯಮ್) | ೩೦ |
| ೨೧. | ದೇವತಾತಾರತಮ್ಯನಿರೂಪಣಮ್ (ಬೃಹದಾರಣ್ಯಕೋಪನಿಷದ್ಭಾಷ್ಯಮ್) | ೩೨ |
| ೨೨. | ದೇವತಾತಾರತಮ್ಯನಿರೂಪಣಮ್ (ಬೃಹದಾರಣ್ಯಕೋಪನಿಷದ್ಭಾಷ್ಯಮ್) | ೩೩ |
| ೨೩. | ತತ್ತ್ವತಾರತಮ್ಯಮ್ (ಕಾಠಕೋಪನಿಷದ್ಭಾಷ್ಯಮ್) | ೩೬ |
| ೨೪. | ತತ್ತ್ವತಾರತಮ್ಯಮ್ (ಕಾಠಕೋಪನಿಷದ್ಭಾಷ್ಯ) | ೩೭ |
| ೨೫. | ದೇವತಾತಾರತಮ್ಯಮ್ (ಬ್ರಹ್ಮಸೂತ್ರಾನುವ್ಯಾಖ್ಯಾನಮ್) | ೩೭ |
| ೨೬. | ದೇವತಾತಾರತಮ್ಯಮ್ (ಮಹಾಭಾರತತಾತ್ಪರ್ಯನಿರ್ಣಯೇ) | ೩೮ |
| ೨೭. | ದೇವಾನಾಂ ಸಾಧನತಾರತಮ್ಯಮ್ (ಮಹಾಭಾರತತಾತ್ಪರ್ಯನಿರ್ಣಯೇ) | ೩೮ |
| ೨೮. | ಸೃಷ್ಟೌ ದೇವತಾತಾರತಮ್ಯಮ್ (ಮಹಾಭಾರತತಾತ್ಪರ್ಯನಿರ್ಣಯೇ) | ೪೨ |
| ೨೯. | ಲಕ್ಷಣತಾರತಮ್ಯಮ್ (ಮಹಾಭಾರತತಾತ್ಪರ್ಯನಿರ್ಣಯೇ) | ೪೬ |
| ೩೦. | ಲಕ್ಷಣತಾರತಮ್ಯಮ್ (ಬೃಹದಾರಣ್ಯಕಭಾಷ್ಯೇ) | ೪೬ |

೩೧. ಲಕ್ಷಣತಾರತಮ್ಯಮ್ (ಗೀತಾತಾತ್ಪರ್ಯನಿರ್ಣಯೇ) ೪೭
೩೨. ಲಕ್ಷಣತಾರತಮ್ಯಮ್ (ಭಾಗವತತಾತ್ಪರ್ಯನಿರ್ಣಯೇ) ೪೮
೩೩. ದೇವತಾತಾರತಮ್ಯಮ್ (ಭಾಗವತತಾತ್ಪರ್ಯನಿರ್ಣಯೇ) ೪೮
೩೪. ತತ್ತ್ವತಾರತಮ್ಯಮ್ (ತತ್ತ್ವಸಂಖ್ಯಾನೇ) ೫೦
೩೫. ತತ್ತ್ವತಾರತಮ್ಯಮ್ (ತತ್ತ್ವವಿವೇಕೇ) ೫೦
೩೬. ದೇವತಾತಾರತಮ್ಯಮ್ (ಗೀತಾಭಾಷ್ಯೇ) ೫೧
೩೭. ಸಾಧನತಾರತಮ್ಯಮ್ (ಬ್ರಹ್ಮಸೂತ್ರಾನುವ್ಯಾಖ್ಯಾನೇ) ೫೨
೩೮. ಸಾಧನತಾರತಮ್ಯಮ್ (ಬ್ರಹ್ಮಸೂತ್ರಾನುವ್ಯಾಖ್ಯಾನೇ) ೫೨
೩೯. ದರ್ಶನತಾರತಮ್ಯಮ್ (ತೈತ್ತಿರೀಯೋಪನಿಷದ್ಭಾಷ್ಯೇ) ೫೩
೪೦. ಪ್ರತಿಭಾತಾರತಮ್ಯಮ್ (ಅನುವ್ಯಾಖ್ಯಾನ) ೫೪
೪೧. ಜ್ಞಾನತಾರತಮ್ಯಮ್ (ಪ್ರಮಾಣಲಕ್ಷಣೇ) ೫೪

೩. ಶ್ರೀಮದ್ಭಾಗವತಾದಿಪುರಾಣೇಷು ತಾರತಮ್ಯಮ್ ೫೬-೬೦

೪೨. ಚೇತನತಾರತಮ್ಯಮ್ (ಶ್ರೀಮದ್ಭಾಗವತೇ) ೫೬
೪೩. ದೇವತಾತಾರತಮ್ಯಮ್ (ಶ್ರೀಮದ್ಭಾಗವತೇ) ೫೬
೪೪. ತತ್ತ್ವತಾರತಮ್ಯಮ್ (ಶ್ರೀಮದ್ಭಾಗವತೇ) ೫೭
೪೫. ಆನಂದತಾರತಮ್ಯಮ್ (ವಾಯುಪುರಾಣೇ) ೫೮
೪೬. ದೇವತಾತಾರತಮ್ಯಮ್ (ವಾಯುಪುರಾಣ) ೬೦

೪. ಶ್ರೀಜಯತೀರ್ಥಕೃತ ತಾರತಮ್ಯಕೃತಯಃ ೬೧-೬೬

೪೭. ದೇವತಾತಾರತಮ್ಯಮ್ (ನ್ಯಾಯಸುಧಾ) ೬೧
೪೮. ಜ್ಞಾನತಾರತಮ್ಯಮ್ (ಪ್ರಮಾಣಲಕ್ಷಣಟೀಕಾ-ನ್ಯಾಯಕಲ್ಪಲತಾಯಾಮ್) ೬೧
೪೯. ಜ್ಞಾನತಾರತಮ್ಯಮ್ (ಪ್ರಮಾಣಪದ್ಧತೌ) ೬೫

೫. ಅಂಶಾವೇಶಾವತಾರಾದಿ ನಿರ್ಣಯಃ ೬೭-೭೬

೫೦. ಅಂಶಾವತಾರಃ (ಶ್ರೀನಾರಾಯಣಪಂಡಿತಾಚಾರ್ಯಕೃತ) ೬೭
೫೧. ಆವೇಶಮಾಲಾ (ರಾಮನಾಮ್ನಾ ಕೃತಾ) ೭೪

೬. ದೇವತಾತಾರತಮ್ಯಸ್ತೋತ್ರಾಣಿ (ಯತಿವರೇಣ್ಯಕೃತಾನಿ) ೭೭-೧೦೬

೫೨. ತಾರತಮ್ಯಸ್ತೋತ್ರಮ್ (ಶ್ರೀವಾದಿರಾಜತೀರ್ಥಶ್ರೀಚರಣಕೃತಮ್) ೭೭
೫೩. ತಾರತಮ್ಯಸ್ತೋತ್ರಮ್ (ಶ್ರೀಕಲ್ಯಾಣೀದೇವೀವಿರಚಿತಂ) ೮೦
೫೪. ತಾರತಮ್ಯಸ್ತೋತ್ರಮ್ (ಶ್ರೀರಘೂತ್ತಮತೀರ್ಥಕೃತ) ೮೧
೫೫. ಸೋಪಾನಜ್ಞಾಪಕಮ್ (ಶ್ರೀರಘೂತ್ತಮತೀರ್ಥಕೃತ) ೮೨
೫೬. ಗುಣತಾರತಮ್ಯಮ್ (ಶ್ರೀರಘೂತ್ತಮತೀರ್ಥಮುನಿಕೃತಮ್) ೮೩
೫೭. ಗುಣತಾರತಮ್ಯಮ್ (ಶ್ರೀರಘೂತ್ತಮತೀರ್ಥಕೃತಮ್) ೮೫

೫೮. ತಾರತಮ್ಯಸಂಗ್ರಹಃ (ಶ್ರೀಸತ್ಯವ್ರತತೀರ್ಥಕೃತ) ೮೮
೫೯. ಗುಣತಾರತಮ್ಯಮ್ (ಶ್ರೀಸತ್ಯವ್ರತತೀರ್ಥಕೃತ) ೯೩
೬೦. ತತ್ತ್ವಪ್ರದೀಪಿಕಾ (ಶ್ರೀನೃಸಿಂಹಭಿಕ್ಷುಕೃತ) ೯೬
೬೧. ಪ್ರಮೇಯಮಾಲಾ (ಶ್ರೀಸತ್ಯಪರಾಕ್ರಮತೀರ್ಥಕೃತ) ೯೯

## ೭. ದೇವತಾತಾರತಮ್ಯಸ್ತೋತ್ರಾಣಿ ೧೦೭-೨೫೯

೬೨. ತಾರತಮ್ಯನವಶ್ಲೋಕೀ ಮುಕ್ತಾಮಾಲಾ (ಶ್ರೀವೇಣುಪಲ್ಲೀಶ್ರೀನಿವಾಸತೀರ್ಥಕೃತಾ) ೧೦೭
೬೩. ತಾರತಮ್ಯಸದ್ರತ್ನಮಾಲಾ (ಶ್ರೀವಿಠಲಾಚಾರ್ಯಕೃತ) ೧೦೮
೬೪. ತಾರತಮ್ಯೋಕ್ತಿಕೌಸ್ತುಭಃ (ಶ್ರೀಛಲಾರೀನರಸಿಂಹಾಚಾರ್ಯಕೃತ) ೧೧೫
೬೫. ತಾರತಮ್ಯಸ್ತೋತ್ರಮ್ (ತತ್ತ್ವಬೋಧಃ)(ಶ್ರೀಚನ್ನಕೇಶವಾಚಾರ್ಯಕೃತ) ೧೨೦
೬೬. ತಾರತಮ್ಯಮಣಿಮಾಲಾ (ಶ್ರೀವಿಟ್ಠಲಾಚಾರ್ಯೇಣ ಕೃತಾ) ೧೨೫
೬೭. ತಾರತಮ್ಯಸ್ತೋತ್ರಮ್ (ತಾಮ್ರಪರ್ಣೀಶ್ರೀಆನಂದತೀರ್ಥಾಚಾರ್ಯಕೃತಮ್) ೧೨೭
೬೮. ತಾರತಮ್ಯಪದ್ಯರತ್ನಮಾಲಿಕಾ (ಶ್ರೀರಾಮಾಚಾರ್ಯಕೃತ) ೧೩೨
೬೯. ತಾರತಮ್ಯಸಂಗ್ರಹಃ (ಶ್ರೀವೇಂಕಟಪತಿನಾ ವಿರಚಿತಃ) ೧೪೦
೭೦. ತಾರತಮ್ಯಸ್ತೋತ್ರಮ್ (ಶ್ರೀರಾಮಾಚಾರ್ಯರಕೃತಮ್) ೧೫೦
೭೧. ತಾರತಮ್ಯಪ್ರಕಾಶಃ (ಶ್ರೀವೇಂಕಟೇಶಾಚಾರ್ಯಕೃತಃ) ೧೫೭
೭೨. ತಾರತಮ್ಯಪಾರಿಜಾತಃ (ಶ್ರೀಅನಂತಾಚಾರ್ಯೇಣ ಕೃತಃ) ೧೬೧
೭೩. ತಾರತಮ್ಯರತ್ನಮಾಲಾ (ಶ್ರೀಶ್ರೀನಿವಾಸಾಚಾರ್ಯಶಿಷ್ಯಕೃತಾ) ೧೬೫
೭೪. ತಾರತಮ್ಯಪ್ರಬಂಧಃ (ಶ್ರೀನಾರಾಯಣಾಚಾರ್ಯಸೂನುಕೃಷ್ಣಪ್ರಣೀತಃ) ೧೬೮
೭೫. ತಾರತಮ್ಯಸಂಗ್ರಹದೀಪಿಕಾ (ಶ್ರೀಕರವೀರಪುರಮಧ್ವಾಚಾರ್ಯವಿರಚಿತಾ) ೧೭೫
೭೬. ತಾರತಮ್ಯಸಂಗ್ರಹಃ (ಶ್ರೀನೃಸಿಂಹಾಚಾರ್ಯವಿರಚಿತಃ) ೧೮೧
೭೭. ತಾರತಮ್ಯಸಂಗ್ರಹಃ (ಶ್ರೀಆನಂದಾಚಾರ್ಯಕೃತಃ) ೧೮೪
೭೮. ತಾರತಮ್ಯಸಂಗ್ರಹಃ (ಶ್ರೀಮುದ್ಗಲಾನಂದತೀರ್ಥಾಚಾರ್ಯಕೃತಃ) ೧೮೮
೭೯. ಅಣುತಾರತಮ್ಯಸ್ತೋತ್ರಮ್ (ಶ್ರೀರಘೂತ್ತಮಾಚಾರ್ಯವಿರಚಿತಂ) ೧೯೦
೮೦. ಕಕ್ಷ್ಯಾತಾರತಮ್ಯಮ್ (ಶ್ರೀಎಲಮೇಲಿವಿಟ್ಠಲಾಚಾರ್ಯಕೃತಮ್) ೧೯೧
೮೧. ತಾರತಮ್ಯಸ್ತೋತ್ರಪ್ರಕಾಶಃ (ಶ್ರೀಗೋಪಾಲಾಚಾರ್ಯೋದ್ಧೃತಃ) ೧೯೫
೮೨. ತಾರತಮ್ಯಮ್ (ಶ್ರೀವೇದಗರ್ಭಾನಂತಪದ್ಮನಾಭಾಚಾರ್ಯಕೃತಮ್) ೨೦೦
೮೩. ತಾರತಮ್ಯಸಂಗ್ರಹಃ - ೬ (ಶ್ರೀಶೇಷನಿರ್ಮಿತಃ) ೨೦೭
೮೪. ತಾರತಮ್ಯಸಂಗ್ರಹಃ (ಶ್ರೀಪ್ರಜ್ಞಾಚಾರ್ಯಕೃತಃ) ೨೨೭
೮೫. ತಾರತಮ್ಯಾಷ್ಟಕಮ್ (ಬಾಣಂದೂರು ಶ್ರೀರಾಮಾಚಾರ್ಯಕೃತಮ್) ೨೩೦
೮೬. ತಾರತಮ್ಯಸ್ತವನಮ್ (ಶ್ರೀರಾಮಚಾರ್ಯಕೃತಮ್) ೨೩೧
೮೭. ತಾರತಮ್ಯರತ್ನಮಾಲಾ (ಶ್ರೀಯಾದವಾಚಾರ್ಯರಚಿತಾ) ೨೩೮
೮೮. ತಾರತಮ್ಯಮ್ (ಗೂಢಕರ್ತೃಕ) ೨೪೨
೮೯. ತಾರತಮ್ಯಗದ್ಯಮ್ (ಶ್ರೀಕಾರಹಾಡಿಕಶ್ರೀನಿವಾಸಾಚಾರ್ಯವಿರಚಿತಂ) ೨೪೫
೯೦. ಸಂಗ್ರಹಗುಣತಾರತಮ್ಯಮ್ (ಶ್ರೀಗುರ್ಜಾಲವ್ಯಾಸಾಚಾರ್ಯಕೃತ) ೨೪೮

೯೧. ತಾರತಮ್ಯಮ್ (ಗುರ್ಜಾಲಿ ಶ್ರೀವ್ಯಾಸಪ್ಪಾಚಾರ್ಯಕೃತ) ೨೪೮
೯೨. ತಾರತಮ್ಯಸ್ತೋತ್ರಮ್ (ಗೂಢಕರ್ತೃಕ) ೨೫೩
೯೩. ನದೀತಾರತಮ್ಯಸ್ತೋತ್ರಮ್ (ಶ್ರೀರಾಘವೇಂದ್ರತೀರ್ಥಶ್ರೀಚರಣಕೃತ) ೨೫೪
೯೪. ತಾರತಮ್ಯಮಂಗಲಾಷ್ಟಕಮ್ (ಶ್ರೀರಾಮಾಚಾರ್ಯಕೃತ) ೨೫೪
೯೫. ತಾರತಮ್ಯಮಂಗಲಾಷ್ಟಕಮ್ (ಗೂಢಕರ್ತೃಕ) ೨೫೬
೯೬. ತಾರತಮ್ಯಸ್ತುತಿಮಂಗಲಾಷ್ಟಕಮ್ (ಶ್ರೀಕಟ್ಟಮುದ್ದುರಮಣಕೃತ) ೨೫೭
೯೭. ತಾರತಮ್ಯಮಂಗಲಾಶಂಸನಮ್ (ಶ್ರೀರಾಜರಾಜೇಶ್ವರತೀರ್ಥಕೃತ) ೨೫೯

## ಪರಿಶಿಷ್ಟಗಳು ೨೬೦-೩೫೨

೯೮. ಪರಿಶಿಷ್ಟ - ೧ : ತಾರತಮ್ಯಸದ್ರತ್ನಮಾಲಾದೀಪಿಕಾ ೨೬೦
೯೯. ಪರಿಶಿಷ್ಟ - ೨ : ತಾರತಮ್ಯನವಶ್ಲೋಕೀಮುಕ್ತಾಮಾಲಾ ದೀಪಿಕಾ ೨೬೦
೧೦೦. ಪರಿಶಿಷ್ಟ - ೩ : ತಾರತಮ್ಯಪಂಚಶ್ಲೋಕೀವಿವೃತಿಃ ೨೬೧
೧೦೧. ಪರಿಶಿಷ್ಟ - ೪ : ತಾರತಮ್ಯಸ್ತೋತ್ರವ್ಯಾಖ್ಯಾನಮ್ ೨೬೨
೧೦೨. ಪರಿಶಿಷ್ಟ - ೫ : ತಾರತಮ್ಯಸಂಗ್ರಹದೀಪಿಕಾವ್ಯಾಖ್ಯಾ ೨೬೩
೧೦೩. ಪರಿಶಿಷ್ಟ - ೬ : ತಾರತಮ್ಯರತ್ನದರ್ಪಣಮ್ ೨೬೪
೧೦೪. ಪರಿಶಿಷ್ಟ - ೭ : ದೈತ್ಯತಾರತಮ್ಯಮ್ ೨೬೬
೧೦೫. ಪರಿಶಿಷ್ಟ - ೮ : ಹರಿಕಥಾಮೃತಸಾರ - ೧ : ಮಂಗಳಾಚರಣ ಸಂಧಿ ೨೭೧
೧೦೬. ಪರಿಶಿಷ್ಟ - ೯ : ಹರಿಕಥಾಮೃತಸಾರ - ೨ : ಅಣುತಾರತಮ್ಯ ಸಂಧಿ ೨೭೪
೧೦೭. ಪರಿಶಿಷ್ಟ - ೧೦ : ಹರಿಕಥಾಮೃತಸಾರ- ೩ : ಬೃಹತ್ತಾರತಮ್ಯ ಸಂಧಿ ೨೭೮
೧೦೮. ಪರಿಶಿಷ್ಟ - ೧೧ : ಹರಿಕಥಾಮೃತಸಾರ- ೪ : ಆರೋಹಣತಾರತಮ್ಯ ಸಂ ೨೮೪
೧೦೯. ಪರಿಶಿಷ್ಟ - ೧೨ : ಹರಿಕಥಾಮೃತಸಾರ- ೫ : ಅವರೋಹಣತಾರತಮ್ಯ ಸಂ ೨೮೮
೧೧೦. ಪರಿಶಿಷ್ಟ -೧೩ : ಹರಿಕಥಾಮೃತಸಾರ- ೬ : ಆವೇಶಾವತಾರ ಸಂಧಿ ೨೯೦
೧೧೧. ಪರಿಶಿಷ್ಟ - ೧೪ : ಹರಿಕಥಾಮೃತಸಾರ - ೭ : ದೇವತಾನುಕ್ರಮಣಿಕಾ ಸಂ ೩೦೨
೧೧೨. ಪರಿಶಿಷ್ಟ - ೧೫ : ಹರಿಕಥಾಮೃತಸಾರ - ೮ : ದೈತ್ಯತಾರತಮ್ಯ ಸಂಧಿ ೩೦೪
೧೧೩. ಪರಿಶಿಷ್ಟ - ೧೬ : ಹರಿಕಥಾಮೃತಸಾರ - ೯ : ಕಲ್ಪಸಾಧನ ಸಂಧಿ ೩೧೦
೧೧೪. ಪರಿಶಿಷ್ಟ - ೧೭ : ಹರಿಕಥಾಮೃತಸಾರ - ೧೦: ಕಕ್ಷ್ಯಾತಾರತಮ್ಯ ಸಂಧಿ ೩೨೩
೧೧೫. ಪರಿಶಿಷ್ಟ - ೧೮ : ತಾರತಮ್ಯ(ನಮಸ್ಕಾರಕ್ರಮ) (ಶ್ರೀಜಗನ್ನಾಥದಾಸರು) ೩೩೫
೧೧೬. ಪರಿಶಿಷ್ಟ - ೧೯ : ಕನ್ನಡ ತಾರತಮ್ಯ (ಗೂಢಕರ್ತೃಕ) ೩೩೮
೧೧೭. ಪರಿಶಿಷ್ಟ - ೨೦ : ದೇವತಾಸ್ತುತಿ (ಶ್ರೀಪುರಂದರದಾಸರು) ೩೩೯
೧೧೮. ಪರಿಶಿಷ್ಟ - ೨೧ : ದೇವತಾತಾರತಮ್ಯ (ಶ್ರೀಪುರಂದರದಾಸರು) ೩೪೦
೧೧೯. ಪರಿಶಿಷ್ಟ - ೨೨ : ತಾರತಮ್ಯ ಮಂಗಲ (ಶ್ರೀಪುರಂದರದಾಸರು) ೩೪೧
೧೨೦. ಪರಿಶಿಷ್ಟ - ೨೩ : ಬೃಹತ್ತಾರತಮ್ಯ ಪದ (ಶ್ರೀಜಗನ್ನಾಥದಾಸರು) ೩೪೨
೧೨೧. ಪರಿಶಿಷ್ಟ - ೨೩ : ಭಗವದಕ್ಷರ ಸ್ತುತಿ (ಶ್ರೀಕನಕದಾಸರು) ೩೫೨

★★★★★

# ಮುನ್ನುಡಿ

ಸ್ತೋತ್ರಮಾಲಿಕಾ ಕೃತಿಶ್ರೇಣಿಯ ಒಂಭತ್ತನೆಯ ಭಾಗ ಇದಾಗಿದೆ.ಇದರಲ್ಲಿ ದೇವತಾತಾರತಮ್ಯಕ್ಕೆ ಸಂಬಂಧಿಸಿದ ವೇದೋಪನಿಷತ್ತುಗಳಿಂದ ಪ್ರಾರಂಭಿಸಿ ಜ್ಞಾನಿವರೇಣ್ಯರ ಕೃತಿಗಳಲ್ಲಿ ಬಂದಿರುವ ತಾರತಮ್ಯಪ್ರತಿಪಾದಕ ಕೃತಿಗಳ ಸಂಗ್ರಹ ಇರುವುದು. ಇದು ಒಂದು ರೀತಿಯಲ್ಲಿ ತಾರತಮ್ಯತತ್ತ್ವ ಪ್ರತಿಪಾದಕ ಕೃತಿಯಾದರೆ, ಮತ್ತೊಂದು ರೀತಿಯಲ್ಲಿ ತಾರತಮ್ಯಕ್ರಮದಲ್ಲಿ ದೇವತಾಸ್ತೋತ್ರವೂ ಆಗಿದೆ.

ಮಧ್ವಸಿದ್ಧಾಂತವು ವೈದಿಕ ಸಾಹಿತ್ಯಕ್ಕೆ ಪರಿಪೂರ್ಣ ನ್ಯಾಯಸಲ್ಲಿಸಿದ ವಿಶಿಷ್ಟಸಿದ್ಧಾಂತ; ಮೂಲಗ್ರಂಥಗಳ ಸಕಲ ಪ್ರಮೇಯಗಳನ್ನು ಸಹ ತಾತ್ತ್ವಿಕ ಹಿನ್ನೆಲೆಯಲ್ಲಿ ನಿರೂಪಿಸಿದ ಹಿರಿಮೆ ಈ ಸಿದ್ಧಾಂತದ್ದು. ಸಿದ್ಧಾಂತ ಎಂಬ ಹೆಸರು ಅದಕ್ಕೆ ಸಂಪೂರ್ಣ ಸಾರ್ಥಕ ಎಂಬುದನ್ನು ಶ್ರೀವಾದಿರಾಜಸ್ವಾಮಿಗಳು ಯುಕ್ತಿಮಲ್ಲಿಕೆಯಂತಹ ತಮ್ಮ ಗ್ರಂಥರಾಜದಲ್ಲಿ ಉಪಪಾದಿಸಿರುವರು.

ಮಧ್ವಸಿದ್ಧಾಂತದ ಮಹಾಪ್ರಮೇಯಗಳಲ್ಲಿ ತಾರತಮ್ಯವು ಅತ್ಯಂತ ಗಮನಾರ್ಹವೆನ್ನಿಸುವ ತತ್ವವಾಗಿದೆ. 'ತಾರತಮ್ಯಂ ತತೋ ಜ್ಞೇಯಂ ಸರ್ವೋಚ್ಚತ್ವಂ ಹರೇಸ್ತಥಾ', 'ತಾರತಮ್ಯಪರಿಜ್ಞಾನೇ ಮಹಾತಾತ್ಪರ್ಯಮಿಷ್ಯತೇ'[೧].

---

೧. ತಾರತಮ್ಯೇನ ತೇಷ್ವದ್ಧಾ ಭಕ್ತಿರ್ದೃಷ್ಟಾನುಸಾರತಃ।
ವಿಷ್ಣುಪ್ರಸಾದಾನುಸಾರಾತ್ ಕಾರ್ಯಾ ದೋಷಸ್ತದನ್ಯಥಾ।
ಸ್ವಪ್ರೀತ್ಯನುಸೃತೌ ಪ್ರೀತಿರ್ಲೋಕೇಽಪ್ಯದ್ದೈವ ದೃಶ್ಯತೇ।
ತಾರತಮ್ಯಪರಿಜ್ಞಾನಮಪ್ಯೇತೇನೈವ ಸಾಧನಮ್।

'ಲಕ್ಷ್ಮೀವಿರಿಂಚವಾಣೀಶಗಿರಿಜೇಂದ್ರಾ ಗಿರಾಂ ಪತಿಃ।
ಸೂರ್ಯಾದಯಶ್ಚ ಕ್ರಮಶೋ ಭಗವತ್ಪ್ರೀತಿಗೋಚರಾಃ।
ತೇಷು ಭಕ್ತಿಃ ಕ್ರಮೇಣೈವ ಕಾರ್ಯಾ ನಿತ್ಯಂ ಮುಮುಕ್ಷುಭಿಃ।
ಸರ್ವೇಽಪಿ ಗುರವಶ್ಚೈತೇ ಪುರುಷಸ್ಯ ಸದೈವ ಹಿ।
ತಸ್ಮಾತ್ ಪೂಜ್ಯಾಶ್ಚ ನಮ್ಯಾಶ್ಚ ಧ್ಯೇಯಾಶ್ಚ ಪರಿತೋ ಹರಿಮ್।'
ಇತಿ ಷಾಡ್ಗುಣ್ಯವಚನಾದಪ್ಯೇಷೋಽರ್ಥೋಽವಸೀಯತೇ।

''ದೇವತಾತಾರತಮ್ಯಂ ಚ ಸರ್ವೋತ್ಕೃಷ್ಟಂ ಚ ಕೇಶವಮ್।
ಜ್ಞಾತ್ವೈವ ಮುಚ್ಯತೇ ಹ್ಯಸ್ಮಾನ್ನಾನ್ಯಥಾ ತು ಕಥಂಚನ'।
ಇತಿ ಪೈಂಗಿಶ್ರುತಿಶ್ಚಾಹ ದೃಶ್ಯತೇಽತ್ರ ಚ ಸರ್ವಶಃ॥ – ॥ ೫೬ ॥

ಮಾನುಷಾದಿವಿರಿಂಚಾಂತಂ ತಾರತಮ್ಯಂ ವಿಮುಕ್ತಿಗಮ್।
ತತೋ ವಿಷ್ಣೋಃ ಪರೋತ್ಕರ್ಷಂ ಸಮ್ಯಗ್ ಜ್ಞಾತ್ವಾ ವಿಮುಚ್ಯತೇ॥'' – ಇತಿ ಕೌರ್ಮೇ॥ ೧೪ ॥

'ತಾರತಮ್ಯಪರಿಜ್ಞಾನಪೂರ್ವಕಂ ಸರ್ವತೋ ಹರೇಃ।
ಆಧಿಕ್ಯೇ ಸರ್ವವಾಕ್ಯಾನಾಂ ತಾತ್ಪರ್ಯಂ ಮಹದಿಷ್ಯತೇ॥' ಇತಿ ಚ।

ಮಾನುಷೋತ್ತಮಮಾರಭ್ಯ ಬ್ರಹ್ಮಾಂತಾನಾಂ ಪ್ರಯತ್ನತಃ।
ವಿಷ್ಣೋರ್ಭಕ್ತಿಜ್ಞಾನಪೂರ್ವಂ ಭವೇನ್ಮುಕ್ತಿಃ ಪ್ರಸಾದತಃ। – ಬೃಹದಾರಣ್ಯಕ

ತಾರತಮ್ಯ ಶಬ್ದದ ಅರ್ಥ ಹೀಗಿದೆ; ತರ ಎಂಬುದು ಎರಡರಲ್ಲಿ ಶ್ರೇಷ್ಠ ಎಂಬ ಅರ್ಥವನ್ನು ಕೊಟ್ಟರೆ, ತಮ ಎಂಬುದು ಅನೇಕ ವಸ್ತುಗಳಲ್ಲಿ ಶ್ರೇಷ್ಠ ಎಂಬ ಅರ್ಥವನ್ನು ಕೊಡುತ್ತದೆ. ಹೆಚ್ಚು ಅದಕ್ಕಿಂತ ಹೆಚ್ಚು ಅತ್ಯಂತ ಹೆಚ್ಚು ಎಂಬುದು ಇದರ ಅರ್ಥ. ಎಂದರೆ ಜೀವಿಗಳಲ್ಲಿ, ವಸ್ತುಗಳಲ್ಲಿ ಎಲ್ಲರೂ, ಎಲ್ಲವೂ ಒಂದೇ ತೆರನಾಗಿಲ್ಲ, ಎಲ್ಲಡೆಯೂ ತ್ತಮ, ಮಧ್ಯಮ, ಅಧಮ ಎಂಬ ವ್ಯತ್ಯಾಸ ಸ್ವಾಭಾವಿಕವಾಗಿಯೇ ಇದ್ದೇ ಇರುವುದು ಎಂದು ಅರ್ಥ.

ಲೋಕದಲ್ಲೂ ಸಹ ಇದು ಎಲ್ಲರೂ ಪ್ರತಿನಿತ್ಯ ಕಾಣುವಂತಹ ನಿತ್ಯಸತ್ಯ. ಮನುಷ್ಯರಲ್ಲಿರಲಿ, ವಸ್ತುಗಳಲ್ಲೂ ಸಹ ಇಂತಹ ತಾರತಮ್ಯ ಇದ್ದದ್ದೆ. ಮನೆ, ಹಣ್ಣು ತರಕಾರಿ, ಮನೆಯ ನಿತ್ಯೋಪಯೋಗಿ ವಸ್ತುಗಳು, ಸಂಚರಿಸುವ ವಾಹನಗಳು, ಉಪಯೋಗಿಸುವ ಉಪಕರಣಗಳು ಮೊದಲಾಗಿ ಎಲ್ಲದರಲ್ಲೂ ಸಹ ಮೇಲು, ಕೀಳು ಎಂಬ ಭಾವ ಇದ್ದದ್ದೆ. ಇನ್ನು ಪರೀಕ್ಷಾಫಲಿತಾಂಶದಲ್ಲೂ ಪ್ರಥಮ, ದ್ವಿತೀಯ, ತೃತೀಯ ಮೊದಲಾದ ವಿಭಾಗಗಳನ್ನು ಕಾಣುವೆವಲ್ಲವೇ !

---

'ನರಾದಿಬ್ರಹ್ಮಪರ್ಯಂತಂ ವಿಮುಕ್ತಾನಾಂ ಶತೋಚ್ಚ್ರಯಃ।
ನಿಃಶೇಷದುಃಖಹೀನಾನಾಂ ನಿತ್ಯಾನಂದೈಕಭೋಗಿನಾಮ್ ।
'ಅಭೇದಮೀಶರೂಪಾಣಾಂ ಭೇದಂ ಜೀವೇಶಯೋರಪಿ।
ಯಃ ಪಶ್ಯೇತ್ ಸ್ಥಿರಯಾ ಬುದ್ಧ್ಯಾ ಭಕ್ತಿಮಾನ್ ಸ ವಿಮುಚ್ಯತೇ' ಇತಿ ಭವಿಷ್ಯತ್ಪುರಾಣೇ।
ತಾರತಮ್ಯಂ ತತೋ ಜ್ಞೇಯಂ ಸರ್ವೋಚ್ಚತ್ವಂ ಹರೇಸ್ತಥಾ।
ಏತದ್ವಿನಾ ನ ಕಸ್ಯಾಪಿ ವಿಮುಕ್ತಿಃ ಸ್ಯಾತ್ ಕಥಂಚನ ॥ -ಮ.ಭಾ.ತಾ.ನಿ (೧/೮೧)

ಪ್ರಣತಕಾಮದನಂಘ್ರಿಸಂದರುಶನ ಅಪೇಕ್ಷೆಗಳುಳ್ಳವಗೆ ನಿ-
ಚ್ಚಣಿಕೆಯೆನಿಪುದು ಜಡಮೊದಲು ಬ್ರಹ್ಮಾಂತತರತಮವು।
ಮನವಚನದಿಂ ಸ್ಮರಿಸುವರ ಭವವನಧಿ ಶೋಷಿಸಿ ಪೋಗುವುದು ಕಾ-
ರಣವೆನಿಸುವುದು ಜ್ಞಾನಭಕ್ತಿವಿರಕ್ತಿಸಂಪದಕೆ ॥ - ಹರಿಕಥಾಮೃತಸಾರ (೨೦/೧೭)

ದೇವದೈತ್ಯರ ತಾರತಮ್ಯವು ಪಾವಮಾನಿ ಮತಾನುಗರಿಗಿದು
ಕೇವಲಾವಶ್ಯಕವು ತಿಳಿವುದು ಸರ್ವಕಾಲದಲಿ।
ದಾವಶಿಖಿ ಪಾಪಾಟವಿಗೆ ನವನಾವೆಯೆನಿಪುದು ಭವಸಮುದ್ರಕೆ
ಪಾವಟಿಗೆ ವೈಕುಂಠಲೋಕಕಿದೆಂದು ಕರೆಸುವುದು ॥

ತಾರತಮ್ಯಜ್ಞಾನ ಮುಕ್ತಿದ್ವಾರವೆನಿಪುದು ಭಕ್ತಜನರಿಗೆ
ತೋರಿ ಪೇಳಿ ಸುಖಾಬ್ಧಿಯೊಳು ಲೋಲ್ಯಾಡುವುದು ಬುಧರು।
ಕ್ರೂರಮಾನವರಿಗಿದು ಕರ್ಣಕಠೋರವೆನಿಪುದು ನಿತ್ಯದಲಿ ಅಧಿ-
ಕಾರಿಗಳಿಗಿದನರುಪುವುದು ದುಸ್ತರ್ಕಿಗಳ ಬಿಟ್ಟು॥ - ಹರಿಕಥಾಮೃತಸಾರ (೨೩/೨೨,೨೩)

ದೇವದೈತ್ಯರ ತಾರತಮ್ಯವ ಈ ವಿಧದಿ ತಿಳಿದೆಲ್ಲರೊಳು ಲ-
ಕ್ಷ್ಮೀವರನೆ ಸರ್ವೋತ್ತಮನು ಎಂದರಿತು ನಿತ್ಯದಲಿ।
ಸೇವಿಸುವ ಭಕ್ತರಿಗೊಲಿದು ಸುಖವೀವ ಸರ್ವತ್ರದಲಿ ಸುಖಮಯ
ಶ್ರೀವಿರಿಂಚಾದ್ಯಮರನುತ ಜಗನಾಥವಿಟ್ಠಲನು ॥ - ಹರಿಕಥಾಮೃತಸಾರ (೨೯/೧೬)

ದ್ವೈತಸಿದ್ಧಾಂತದ ಈ ತಾರತಮ್ಯ ತತ್ತ್ವವನ್ನು ಅನೇಕರು ತಪ್ಪಾಗಿ ತಿಳಿದಿರುವುದುಂಟು. ತಾರತಮ್ಯ ಎಂದರೆ, ಮೇಲು-ಕೀಳು ಎಂಬುದಾಗಿ ಪಕ್ಷಪಾತ ಮಾಡುವುದು ಎಂಬುದು ಜನ ಭಾವಿಸಿರುವ ತಪ್ಪಾದ ಅರ್ಥ. ತಾರತಮ್ಯ ಮಾಡದೇ ವರ್ತಿಸಬೇಕು, ಮೊದಲಾದ ಮಾತುಗಳಲ್ಲಿ ಈ ಅರ್ಥ ಕಂಡುಬರುವುದು. ಈ ಹಿನ್ನೆಲೆಯಲ್ಲಿ ದ್ವೈತ ಸಿದ್ಧಾಂತದ ತಾರತಮ್ಯವು ತಾರತಮ್ಯ ಧೋರಣೆಗೆ ಕಾರಣವಾಗುವಂತಹ ಲೋಕಕ್ಕೆ ಅಹಿತ ಉಂಟು ಮಾಡುವ ಪ್ರಮೇಯ ಎಂದು ಅನೇಕರು ಆಕ್ಷೇಪಿಸುವುದುಂಟು. ಇದು ಸರ್ವಥಾ ಸರಿಯಲ್ಲ. ಇಲ್ಲಿ ಹೇಳಿದಂತೆ ವಸ್ತುಗಳಲ್ಲಿನ ಸ್ವಾಭಾವಿಕವಾದ ಹಿರಿಮೆ-ಗರಿಮೆಗಳನ್ನು ಅರ್ಥ ಮಾಡಿಕೊಂಡು ಅದಕ್ಕೆ ಅನುಗುಣವಾಗಿ ವರ್ತಿಸುವುದು ಎಂದರ್ಥ. ವಿದ್ಯಾರ್ಥಿಗಳನ್ನು ಸಮನಾಗಿ ಕಾಣುತ್ತಲೇ ಅವರು ಬರೆದಿರುವ ಉತ್ತರಗಳ ಗುಣಮಟ್ಟವನ್ನು ಆಧರಿಸಿ ಅಂಕವನ್ನು ನೀಡಿ ಪ್ರಥಮ, ದ್ವಿತೀಯ ಇತ್ಯಾದಿಯಾಗಿ ಹಾಗೂ ಪ್ರಥಮಶ್ರೇಣಿ, ದ್ವಿತೀಯಶ್ರೇಣಿ ಇತ್ಯಾದಿಯಾಗಿ ನಿರ್ಣಯಿಸುವುದು ಹೇಗೋ ಹಾಗೆ; ಭೋಜನ ಕಾಲದಲ್ಲಿ ಎಲ್ಲರಿಗೂ ಸಮನಾಗಿ ಬಡಿಸುವುದು ಎಂದರೆ, ಹಿರಿಯರು, ಕಿರಿಯರು, ಮಕ್ಕಳು ಮೊದಲಾದವರಿಗೆ ಅವರವರ ಜೀರ್ಣಶಕ್ತಿಗೆ ಅನುಗುಣವಾಗಿ ಬಡಿಸುವುದು ಎಂದೇ ಅರ್ಥ. ಎಲ್ಲರಿಗೂ ಒಂದೇ ಪ್ರಮಾಣದಲ್ಲಿ ಬಡಿಸುವುದು ಎಂದಲ್ಲ. ಎಂದರೆ ವಸ್ತುಗಳಲ್ಲಿ ವ್ಯಕ್ತಿಗಳಲ್ಲಿ ಇರುವ ತಾರತಮ್ಯವನ್ನು ಅರಿಯುವುದು ತತ್ತ್ವ ಎಂದರ್ಥವೇ ಹೊರತು ತಾರತಮ್ಯವನ್ನು ಉಂಟು ಮಾಡುವುದು ಎಂದರ್ಥವಲ್ಲ. ನಾವು ಕಾಣುವ ಪ್ರತಿ ವಸ್ತುಗಳಲ್ಲೂ ವ್ಯಕ್ತಿಗಳಲ್ಲೂ ತಾರತಮ್ಯವಿರುವುದು ಸರ್ವರ ಅನುಭವದಿಂದ ಸಿದ್ಧವಾಗಿರುವಾಗ ಅದನ್ನು ಅಲ್ಲಗಳೆಯುವುದು ಸರ್ವಥಾ ಅನುಚಿತ. ವಸ್ತುಗಳು ಸಮನಾಗಿದ್ದಾಗ ಅವುಗಳಲ್ಲಿ ಮೇಲು ಕೀಳುಗಳನ್ನು ಉಂಟುಮಾಡುವುದು ಮಾತ್ರ ಅಪಚಾರವೇ ಸರಿ. ಅದನ್ನೆಂದೂ ಶಾಸ್ತ್ರಗಳು ಹೇಳಿಲ್ಲ; ಮಧ್ವ ಸಿದ್ಧಾಂತವೂ ಒಪ್ಪಿಲ್ಲ.

ಜೀವರಲ್ಲಿ ಹಾಗೂ ಪದಾರ್ಥಗಳಲ್ಲಿ ವೈವಿಧ್ಯವಿರುವುದು ಸರ್ವರ ಅನುಭವಕ್ಕೂ ವೇದ್ಯವಾಗಿರುವ ವಿಚಾರ. ಜೀವರಲ್ಲಿ ವೈವಿಧ್ಯದೊಂದಿಗೆ ತ್ರೈವಿಧ್ಯವೂ ಇರುವುದು ವಿಶೇಷ. ಸಾತ್ವಿಕರು, ರಾಜಸರು ಹಾಗೂ ತಾಮಸರು ಎಂಬುದಾಗಿ ಜೀವರು ಮೂರು ಬಗೆ. ಭಗವದ್ಭಕ್ತಿ, ಜ್ಞಾನ, ವೈರಾಗ್ಯಾದಿ ಗುಣಗಳನ್ನು ಹೊಂದಿದವರು ಸಾತ್ವಿಕರು. ಅದಕ್ಕೆ ವಿರುದ್ಧವಾಗಿ ಭಗವದ್ದ್ವೇಷ, ಮಿಥ್ಯಾಜ್ಞಾನ, ವಿಷಯಾಸಕ್ತಿ ಮೊದಲಾದ ದೋಷಗಳನ್ನು ಹೊಂದಿದವರು ರಾಜಸರು. ಮಿಶ್ರ ಸ್ವಭಾವದವರು ತಾಮಸರು.

ತಾರತಮ್ಯ ತತ್ತ್ವದ ವಿವೇಚನೆ ತೈತ್ತೀರಿಯೋಪನಿಷತ್ತು, ಬೃಹದಾರಣ್ಯಕೋಪನಿಷತ್ತು, ಐತರೇಯೋಪನಿಷತ್ತು ಮೊದಲಾದ ಅನೇಕ ಉಪನಿಷತ್ತುಗಳಲ್ಲಿ ಸ್ಪಷ್ಟವಾಗಿ ನಿರೂಪಿತವಾಗಿದೆ. ಉಪನಿಷತ್ತುಗಳು ಎಲ್ಲ ವೈದಿಕ ಮತಾಚಾರ್ಯರಿಗೂ ಸಮ್ಮತವಾಗಿದ್ದು ಅದರಲ್ಲಿಯ ಬ್ರಹ್ಮಾನಂದ-ವಲ್ಲಿ ಮೊದಲಾದ ಭಾಗಗಳು ಸಹ ಸರ್ವಸಮ್ಮತವೆನ್ನಿಸಿವೆ. ತೈತ್ತಿರೀಯೋಪನಿಷತ್ತಿನಲ್ಲಿನ – ಸೈಷಾ ಆನಂದಸ್ಯ ಮೀಮಾಂಸಾ ಭವತಿ – ಎಂಬುದಾಗಿ ವಿವರವಾಗಿ ನಿರೂಪಿತವಾಗಿರುವ ತಾರತಮ್ಯ ಅತ್ಯಂತ ತಾತ್ತ್ವಿಕವಾದುದು. ಕೆಲವರು ಅದನ್ನು ಸಾಧನಾವಸ್ಥೆಯಲ್ಲಿನ ತಾರತಮ್ಯದ ನಿರೂಪಣೆ ಮಾತ್ರ ಎಂಬುದಾಗಿ ವ್ಯಾಖ್ಯಾನಿಸುವುದುಂಟು; ಅದು ಸರಿಯಲ್ಲ. ಅದು ಮೋಕ್ಷದಲ್ಲೂ ಉಳಿಯುವಂತಹ ಸ್ವಾಭಾವಿಕವಾದ ತಾರತಮ್ಯ ಎಂಬುದನ್ನು ಶ್ರೀಮದಾಚಾರ್ಯರು ವಿವರವಾಗಿ ನಿರೂಪಿಸಿರುವರು.

ಅಲ್ಲಿ ಬಂದಿರುವ ಶ್ರೋತ್ರಿಯಸ್ಯ, ಅಕಾಮಹತಸ್ಯ ಮೊದಲಾದ ಪದಗಳು ಮುಖ್ಯವಾಗಿ ಮುಕ್ತರಿಗೆ ಅನ್ವಯಿಸುವಂತಹ ಪದಗಳೇ ಆಗಿವೆ ಎಂಬುದನ್ನು ಸಾಧಾರವಾಗಿ ತಮ್ಮ ಸರ್ವಮೂಲ ಗ್ರಂಥಗಳಲ್ಲಿ ವಿವೇಚಿಸಿರುವರು. ಸಾಧನದಲ್ಲಿಯ ತಾರತಮ್ಯ ಕ್ರಮವು ಸಿದ್ಧಿಯಲ್ಲಿಯೂ ಸಹ ಉಳಿದೇ ಉಳಿಯುವುದು; 'ಸಾಧನಸ್ಯೋತ್ತಮತ್ವೇನ ಸಾಧ್ಯಂ ಚೋತ್ತಮಮಾಪ್ನುಯುಃ'. ಆದ್ದರಿಂದ ಬ್ರಹ್ಮವಲ್ಲಿ ಮೊದಲಾದವುಗಳಲ್ಲಿಯ ತಾರತಮ್ಯವು ಮೋಕ್ಷದಲ್ಲಿಯ ತಾರತಮ್ಯವನ್ನೇ ವಿವರಿಸುವುದು ಎಂಬುದು ಯುಕ್ತವೆನ್ನಿಸುವುದು. ಇತರ ಉಪನಿಷತ್ತುಗಳಲ್ಲೂ ಸಹ ಬಗೆಬಗೆಯಲ್ಲಿ ಈ ತಾರತಮ್ಯ ತತ್ತ್ವ ನಿರೂಪಿತವಾಗಿದೆ[1].

ತಾರತಮ್ಯದ ವಿವೇಚನೆಯಂತೆ ಸರ್ವೋತ್ತಮ ದೇವತೆ ಸಾಕ್ಷಾತ್ ಶ್ರೀಹರಿ, ಜ್ಞಾನಾನಂದಾದಿ ಸಕಲ ಗುಣಗಳಲ್ಲೂ ಸಹ ಮಹಾಲಕ್ಷ್ಮಿಯನ್ನೊಳಗೊಂಡಂತೆ ಅನಂತಪಟ್ಟು ಮಿಗಿಲಾಗಿರುವುದು ಅವನ ಹಿರಿಮೆ[2]. ಶ್ರೀಹರಿಗಿಂತ ಅನಂತಪಟ್ಟು ಕಡಿಮೆ ಎನ್ನಿಸುವ ಮಹಾಲಕ್ಷ್ಮಿಯು ಮುಕ್ತಾಮುಕ್ತರಾದ ಅನಂತಾನಂತ ಬ್ರಹ್ಮಾದಿ ಸಕಲ ದೇವಾದಿವೃಂದಕ್ಕಿಂತಲೂ, ಸದಾಕಾಲವೂ, ಸರ್ವರೀತಿಯಲ್ಲೂ ಒಟ್ಟಾಗಿಯೇ ಕೋಟಿಪಟ್ಟು ಮಿಗಿಲಾದ ಮಹಾದೇವತೆ[3]. ಸ್ವತಂತ್ರನಾದ ಮಹಾವಿಷ್ಣುವಿನಂತೆ ಅವನ ಪತ್ನಿಯಾದ ಮಹಾಲಕ್ಷ್ಮಿಯು ನಿತ್ಯಮುಕ್ತಳು. ಇತರ ಯಾರಿಗೂ ಇಲ್ಲದ ವಿಶಿಷ್ಟವಾದ ಹಿರಿಮೆ ಇವರದು. ದೇಶತಃ, ಕಾಲತಃ ಮಹಾವಿಷ್ಣುವಿನೊಂದಿಗೆ ಸಮವ್ಯಾಪ್ತಳಾದ ಇವರು ಗುಣದಲ್ಲಿ ಮಾತ್ರ ಅವನಿಗಿಂತ ಅನಂತಪಟ್ಟು ಕಡಿಮೆ. ಬ್ರಹ್ಮಾದಿಗಳಿಗಿಂತ ಅವರು ಕೋಟಿ ಗುಣ ಮಿಗಿಲು ಎಂಬುದನ್ನು ಸಂಖ್ಯೆಯ ಕೋಟಿ ಎಂಬ ಸೀಮಿತ ಅರ್ಥದಲ್ಲಿ ತಿಳಿಯದೆ, ಕೋಟಿಗಟ್ಟಲೆ ಎಂಬ ಅರ್ಥದಲ್ಲಿ ತಿಳಿಯುವುದು ಸೂಕ್ತ. ಮಹಾವಿಷ್ಣುವಿನ ಹಿರಿಮೆ ಮಹಾಲಕ್ಷ್ಮಿಗಿಂತ ಅತ್ಯಂತ ಮಿಗಿಲು ಎಂಬುದನ್ನು ಸ್ಪಷ್ಟಪಡಿಸಲೆಂದು

---

೧. ''ಸಾಯುಜ್ಯಂ ಸಮನುಪ್ರಾಪ್ತಾ ಅಪಿ ದೇವಾದಯೋಽಖಿಲಾಃ।
ತಾರತಮ್ಯಾದ್ಧಿ ತಿಷ್ಠಂತಿ ತಾರತಮ್ಯಂ ಹಿ ಸಾಧನೇ'' ॥
ಶ್ರುತಿಯುಕ್ತಿಬಲಾದೇವಂ ತಾರತಮ್ಯಂ ವಿಭಾವ್ಯತೇ ॥
ಮುಕ್ತಾವಪಿ ತತಃ ಕೇಽತ್ರ ವಿರೋಧಂ ಕರ್ತುಮೀಶತೇ।
''ಮನುಷ್ಯಗಂಧರ್ವಪಿತೃಗಣಕಾರ್ಮಿಕತಾತ್ವಿಕಾಃ।
ದೇವಾಃ ಶಕ್ರಃ ಶಿವೋ ಬ್ರಹ್ಮಾ ಮುಕ್ತೌ ಸೌಖ್ಯಾದಿಭಿರ್ಗುಣೈಃ॥
ನ ಮುಕ್ತಾನಾಮಪಿ ಹರೇಃ ಸಾಮ್ಯಂ ವಿಷ್ಣೋರಭಿನ್ನತಾಮ್।
ನೈವ ಪ್ರಚಿಂತಯೇತ್ ತಸ್ಮಾದ್ಬ್ರಹ್ಮಾದೇಃ ಸಾಮ್ಯಮೇವ ವಾ॥

೨. ಯೋ ವೇತ್ತಿ ನಿಶ್ಚಿತಮತಿರ್ಹರಿಮಬ್ಜಜೇಶಪೂರ್ವಾಖಿಲಸ್ಯ ಜಗತಃ ಸಕಲೇಽಪಿ ಕಾಲೇ।
ಸೃಷ್ಟಿಸ್ಥಿತಿಪ್ರಲಯಮೋಕ್ಷದಮಾತ್ಮತಂತ್ರಂ ಲಕ್ಷ್ಮ್ಯಾ ಅಪೀಶಮತಿಭಕ್ತಿಯುತಃ ಸ ಮುಚ್ಯೇತ್॥
– ಮ.ಭಾ.ತಾ.ನಿ (೧೩/೧೩೪)

೩. ಶ್ರೀರ್ಭೂರ್ದುರ್ಗೇತಿ ಯಾ ಭಿನ್ನಾ ಮಹಾಮಾಯಾ ತು ವೈಷ್ಣವೀ।
ತಚ್ಛಕ್ತ್ಯನಂತಾಂಶಹೀನಾಽಥಾಪಿ ತಸ್ಯಾಶ್ರಯಾತ್ ಪ್ರಭೋಃ।
ಅನಂತಬ್ರಹ್ಮರುದ್ರಾದೇರ್ನಾಸ್ಯಾಃ ಶಕ್ತಿಃ ಕಲಾಽಪಿ ಹಿ।
ತೇಷಾಂ ದುರತ್ಯಯಾಽಪ್ಯೇಷಾ ವಿನಾ ವಿಷ್ಣುಪ್ರಸಾದತಃ। – ಇತಿ ವ್ಯಾಸಯೋಗೇ – ಗೀತಾಭಾಷ್ಯ

ಬ್ರಹ್ಮಾದಿ ದೇವತೆಗಳಿಗಿಂತ ಮಹಾಲಕ್ಷ್ಮಿಯು ಕೋಟಿ ಪಟ್ಟು ಮಿಗಿಲು, ನಾರಾಯಣ ಅನಂತಪಟ್ಟು ಮಿಗಿಲು ಎಂದು ತಿಳಿಸಲಾಗಿದೆಯೇ ಹೊರತು, ಕೋಟಿ ಸಂಖ್ಯೆಗೆ ಸೀಮಿತಗೊಳಿಸಲು ಮಾತ್ರ ಸರ್ವಥಾ ಅಲ್ಲ ಎಂದು ತಿಳಿಯಬೇಕು.

ಭಗವದ್ಭಕ್ತಿ, ಜ್ಞಾನಾದಿಗಳು ಸಹ ಸಾತ್ವಿಕರಲ್ಲಿ ಏಕರೀತಿಯಲ್ಲಿರದೆ ತಾರತಮ್ಯ ಕ್ರಮದಲ್ಲೇ ಇರುವವು ಎಂಬುದು ವಿಶೇಷ. ಪರೀಕ್ಷೆಯಲ್ಲಿ ಪಾಸಾದವರಲ್ಲಿ ಒಂದೇ ದರ್ಜೆಯವರಲ್ಲೂ ಒಂದೇ ತೆರನಾದ ಅಂಕಗಳು ಇರದೇ ವ್ಯತ್ಯಾಸ ಹೇಗೆ ಇರುವುದೋ ಹಾಗೇ. ಅದರಂತೆ ಅನುತ್ತೀರ್ಣರಾದವರಲ್ಲೂ ಅಂಕಗಳಲ್ಲಿ ವ್ಯತ್ಯಾಸ ಇರುವುದು ಹೇಗೋ ಹಾಗೆ. ಎಂದರೆ ಅನುತ್ತೀರ್ಣನಾದವನು ಶೂನ್ಯದಿಂದ ಮೂವ್ವತ್ತೈದರ ಒಳಗೆ ಯಾವ ಅಂಕವನ್ನಾದರು ಪಡೆದಿರಬಹುದು. ಎಂದರೆ ಅವರಲ್ಲೂ ತಾರತಮ್ಯ ಇದೆ ಎಂದಾಗುವುದು.

ದೇವ–ದೈತ್ಯರ ತಾರತಮ್ಯವು ಮೂಲತಃ ಅವರ ಸ್ವರೂಪಕ್ಕೆ ಅನ್ವಯಿಸುವುದು; ಎಂದರೆ, ಅವರ ಸ್ವರೂಪದಲ್ಲಿಯೇ ಅಂತಹ ತಾರತಮ್ಯ ಘಟಿತವಾಗಿರುವುದು, ಸ್ವಾಭಾವಿಕ ಎಂದರ್ಥ. ಆದ್ದರಿಂದ ಅದು ಅನಾದಿ ಹಾಗೂ ನಿತ್ಯ. ಅವರ ಸಾಧನೆ, ಸಿದ್ಧಿ ಮೊದಲಾದ ಸಕಲ ಹಂತಗಳಲ್ಲೂ ಈ ತಾರತಮ್ಯ ಇದ್ದೇ ಇರುವುದು. ವರ–ಶಾಪ–ಆವೇಶ ಮೊದಲಾದ ಕಾರಣಗಳಿಂದ ಕೆಲವೊಮ್ಮೆ ತಾರತಮ್ಯದಲ್ಲಿ ವ್ಯತ್ಯಾಸವಾದಂತೆ ಕಾಣುವುದುಂಟು. ಆದರೆ, ಅದು ಔಪಾಧಿಕ. ಆ ನಿಮಿತ್ತಗಳು ಕಳೆಯುತ್ತಲೆ ನೈಜ ತಾರತಮ್ಯ ವ್ಯಕ್ತವಾಗುವುದು. ಮುಕ್ತಿಯಲ್ಲೂ ತಾರತಮ್ಯ ಇದ್ದೇ ಇರುವುದು.

ಆದ್ದರಿಂದ ಸಾಧನೆಯ ತಾರತಮ್ಯ ಸಿದ್ಧಿಯಲ್ಲಿಯ ತಾರತಮ್ಯಕ್ಕೆ ದ್ಯೋತಕವಾದ್ದರಿಂದ ಯಾವುದೇ ರೀತಿಯಲ್ಲಿ ಅದನ್ನು ಅಂಗೀಕರಿಸಿದರೂ ಆದು ಸ್ವಾಭಾವಿಕ ತಾರತಮ್ಯದಲ್ಲಿಯೇ ಪರ್ಯವಸಾನಗೊಳ್ಳುವುದು:

**ರುದ್ರಂ ಸಮಾಶ್ರಿತಾ ದೇವಾ ರುದ್ರೋ ಬ್ರಹ್ಮಾಣಮಾಶ್ರಿತಃ।**
**ಬ್ರಹ್ಮಾ ಮಾಮಾಶ್ರಿತೋ ನಿತ್ಯಂ ನಾಹಂ ಕಂಚಿದುಪಾಶ್ರಿತಃ।**

**ಬಲಮಿಂದ್ರಸ್ಯ ಗಿರಿಶೋ ಗಿರಿಶಸ್ಯ ಬಲಂ ಮರುತ್।**
**ಹರಿಸ್ತಸ್ಯ ಬಲಂ ಸಾಕ್ಷಾನ್ನ ಹರೇರ್ಬಲಮನ್ಯತಃ॥**

– ಎಂಬ ಮಹಾಭಾರತ ಮೊದಲಾದ ಮೂಲಗ್ರಂಥಗಳಲ್ಲಿನ ವಾಕ್ಯಗಳು ಇದನ್ನು ಸಮರ್ಥಿಸುತ್ತವೆ. ಇಡೀ ರಾಮಾಯಣ ಮಹಾಭಾರತಗಳ ಪಾತ್ರಗಳ ವರ್ತನೆಯಲ್ಲಿ ತಾರತಮ್ಯ, ಜೀವತ್ರೈವಿಧ್ಯ, ಅಸ್ವಾತಂತ್ರ್ಯ ಮೊದಲಾದವುಗಳು ಸ್ಪಷ್ಟವಾಗಿ ಗೋಚರಿಸುತ್ತವೆ. ಶ್ರೀಮದ್ ಭಾಗವತ, ವಿಷ್ಣುಪುರಾಣ, ವಾಯುಪುರಾಣ, ಗರುಡ ಪುರಾಣ ಮೊದಲಾದವುಗಳಲ್ಲಿ ತಾರತಮ್ಯವು ವಿವರವಾಗಿ ನಿರೂಪಿತವಾಗಿದೆ. ಬ್ರಹ್ಮಸೂತ್ರಗಳಲ್ಲಿ, ಭಗವದ್ಗೀತೆಯಲ್ಲಿ ಸಹ ತಾರತಮ್ಯಕ್ರಮವು ಸ್ಪಷ್ಟವಾಗಿಯೇ ನಿರೂಪಿತವಾಗಿದೆ[೧].

---

೧. ಇಯದಾಮನನಾತ್ (ಬ್ರಹ್ಮಸೂತ್ರ)
ಇಂದ್ರಿಯಾಣಿ ಪರಾಣ್ಯಾಹುರಿಂದ್ರಿಯೇಭ್ಯಃ ಪರಂ ಮನಃ।
ಮನಸಸ್ತು ಪರಾ ಬುದ್ಧಿರ್ಯೋ ಬುದ್ಧೇಃ ಪರತಸ್ತು ಸಃ॥ – ಭಗವದ್ಗೀತೆ (೩/೪೨)

ದೇವತಾತಾರತಮ್ಯದಲ್ಲಿ ಭಕ್ತಿ-ಜ್ಞಾನಾದಿಗಳು ತಾರತಮ್ಯ ಕ್ರಮಕ್ಕೆ ಮುಖ್ಯ ಅಳತೆಗೋಲು ಎನ್ನಿಸಿದರೆ, ದ್ವೇಷ-ಮಿಥ್ಯಾಜ್ಞಾನಾದಿಗಳು ದೈತ್ಯ ತಾರತಮ್ಯಕ್ಕೆ ಅಳತೆಗೋಲು ಎನ್ನಿಸುತ್ತವೆ[1]. ಅದರಂತೆ, ರಾಜಸರಲ್ಲೂ ಯಥಾರ್ಥಜ್ಞಾನ ಪ್ರಚುರ, ಸಂಶಯ ಹಾಗೂ ಮಿಥ್ಯಾಜ್ಞಾನ ಪ್ರಚುರ ಎಂಬುದಾಗಿ ಮೂರು ಬಗೆ.

ಸಾತ್ವಿಕರು ಮುಕ್ತಿ ಯೋಗ್ಯರು, ತಾಮಸರು ತಮೋ ಯೋಗ್ಯರು ಹಾಗೂ ರಾಜಸರು ನಿತ್ಯ ಸಂಸಾರಿಗಳು.

ತಾರತಮ್ಯದಲ್ಲಿ ಆಗುವ ವ್ಯತ್ಯಾಸವು ಎಂತಹ ಉತ್ತಮ ಚೇತನಕ್ಕೂ ಅನರ್ಥಕ್ಕೆ ಕಾರಣ ಎಂಬ ವಿಶೇಷಾಂಶ ಗಮನಾರ್ಹವಾದುದು:

**ಸಮಾನಾಂ ವಿಷಮಾ ಪೂಜಾ ವಿಷಮಾನಾಂ ಸಮಾ ತಥಾ ।**
**ಕ್ರಿಯತೇ ಯೇನ ದೇವೋऽಪಿ ಸ್ವಪದಾದ್ಭ್ರಶ್ಯತೇ ಹಿ ಸಃ[2] ॥**

'ಅಚೇತನಾಸತ್ಯಾಯೋಗ್ಯಾನನುಪಾಸ್ಯಾನ್ಯಫಲತ್ವವಿಪರ್ಯಯಾಭ್ಯಾಮ್' (ಸಂಕರ್ಷಣಸೂತ್ರ).

ಹಿರಣ್ಯಕಶಿಪು ಮೊದಲಾದವರು ಬ್ರಹ್ಮಾದಿ ದೇವತೆಗಳನ್ನೇ ಸರ್ವೋತ್ತಮರೆಂದು ಭ್ರಮಿಸಿ ಸರ್ವಬಗೆಯ ಅನರ್ಥಕ್ಕೆ ಕಾರಣವಾದದ್ದು ಇದಕ್ಕೆ ಉತ್ತಮ ನಿದರ್ಶನ.

ಇನ್ನು ಸರ್ವೋತ್ತಮನಾದ ಶ್ರೀಹರಿ; ಬಳಿಕ ಅಕ್ಷರ ಪುರುಷಳಾದ ಮಹಾಲಕ್ಷ್ಮೀ, ಬಳಿಕ ಬ್ರಹ್ಮ ವಾಯುಗಳು, ಅನಂತರ ಸರಸ್ವತಿ, ಭಾರತಿಯರು, ಅನಂತರ ಇತರರು ಎಂಬುದು ಇನ್ನೊಂದು ಬಗೆಯ ತಾರತಮ್ಯ. ಇವರಲ್ಲಿ ಮಹಾಲಕ್ಷ್ಮೀ, ಬ್ರಹ್ಮ-ವಾಯುಗಳು, ಸರಸ್ವತಿ-ಭಾರತಿಯರು ಈ ಮೂವರು ಪರಶುಕ್ಲತ್ರಯರು ಎಂಬುದಾಗಿ ಪ್ರಸಿದ್ಧ. ಇತರರು ಹಾಗಲ್ಲ ಎಂಬುದು ಇನ್ನೊಂದು ರೀತಿಯ ತಾರತಮ್ಯದ ವಿವೇಚನೆ.

---

ದ್ವಾವಿಮೌ ಪುರುಷೌ ಲೋಕೇ ಕ್ಷರಶ್ಚಾಕ್ಷರ ಏವ ಚ ।
ಕ್ಷರಃ ಸರ್ವಾಣಿ ಭೂತಾನಿ ಕೂಟಸ್ಥೋऽಕ್ಷರ ಉಚ್ಯತೇ ॥
ಉತ್ತಮಃ ಪುರುಷಸ್ತ್ವನ್ಯಃ ಪರಮಾತ್ಮೇತ್ಯುದಾಹೃತಃ ।
ಯೋ ಲೋಕತ್ರಯಮಾವಿಶ್ಯ ಬಿಭರ್ತ್ಯವ್ಯಯ ಈಶ್ವರಃ ॥
ಯಸ್ಮಾತ್ ಕ್ಷರಮತೀತೋऽಹಮಕ್ಷರಾದಪಿ ಚೋತ್ತಮಃ ।
ಅತೋऽಸ್ಮಿ ಲೋಕೇ ವೇದೇ ಚ ಪ್ರಥಿತಃ ಪುರುಷೋತ್ತಮಃ ॥
ಯೋ ಮಾಮೇವಮಸಮ್ಮೂಢೋ ಜಾನಾತಿ ಪುರುಷೋತ್ತಮಮ್ ।
ಸ ಸರ್ವವಿದ್ಭಜತಿ ಮಾಂ ಸರ್ವಭಾವೇನ ಭಾರತ ॥
ಇತಿ ಗುಹ್ಯತಮಂ ಶಾಸ್ತ್ರಮಿದಮುಕ್ತಂ ಮಯಾऽನಘ ।
ಏತದ್ಬುದ್ಧ್ವಾ ಬುದ್ಧಿಮಾನ್ ಸ್ಯಾತ್ ಕೃತಕೃತ್ಯಶ್ಚ ಭಾರತ ॥ ಶ್ರೀಮದ್ಭಗವದ್ಗೀತಾ (೧೫/೧೬-೨೦)

೧. ಲಿಂಗಂ ಸುರಾಣಾಂ ಹಿ ಪರೈವ ಭಕ್ತಿರ್ವಿಷ್ಣೌ ತದನ್ಯೇಷು ಚ ತತ್ಪ್ರತೀಪತಾ ।
ಅತೋऽತ್ರ ಯೇ ಯೇ(ऽ)ಹರಿಭಕ್ತಿತತ್ಪರಾಸ್ತೇ ತೇ(ऽ)ಸುರಾಸ್ತದ್ಭರಿತಾ ವಿಶೇಷತಃ ॥
– ಮ.ಭಾ.ತಾ.ನಿ (೧೧/೨೩೫)
ವಿಷ್ಣುಭಕ್ತಿರ್ಹಿ ಸರ್ವೇಷಾಂ ಸದ್ಗುಣಾನಾಂ ಸ್ವಲಕ್ಷಣಮ್ । – ಕಥಾಲಕ್ಷಣ

೨. ಕೃಷ್ಣಾಮೃತಮಹಾರ್ಣವ

ಬ್ರಹ್ಮಾದಿಗಳು ಕ್ಷರಪುರುಷರು, ಮಹಾಲಕ್ಷ್ಮೀಯು ಅಕ್ಷರಪುರುಷಳು ಅವರಿಗಿಂತ ಮಿಗಿಲಾದ ಶ್ರೀಹರಿಯು ಕ್ಷರಾಕ್ಷರಪುರುಷೋತ್ತಮ ಎಂಬುದು ಸಹ ತಾರತಮ್ಯಕ್ಕೆ ಗಮಕವಾದ ಮತ್ತೊಂದು ಕ್ರಮ.

ದೇವತೆಗಳಲ್ಲೂ ತತ್ತ್ವಾಭಿಮಾನಿ ದೇವತೆಗಳು ಅತತ್ತ್ವಾಭಿಮಾನಿ ದೇವತೆಗಳು ಎಂಬುದಾಗಿ ಇನ್ನೊಂದು ರೀತಿಯ ವ್ಯವಸ್ಥೆ.

ಬ್ರಹ್ಮಾದಿ ಪುಷ್ಕರಾಂತವಾದ ತಾರತಮ್ಯವು ಗುಣ ತಾರತಮ್ಯ, ಕಕ್ಷ್ಯಾತಾರತಮ್ಯ ಎಂಬುದಾಗಿ ಎರಡು ಬಗೆ. ಗುಣತಾರತಮ್ಯ ಎಂದರೆ ಜ್ಞಾನ ಭಕ್ತ್ಯಾದಿಗಳಲ್ಲಿನ ತಾರತಮ್ಯ ಎಂದರ್ಥ. ಶ್ರೀಹರಿಗಿಂತ ಮಹಾಲಕ್ಷ್ಮಿಯು ಅನಂತ ಗುಣ ಕಡಿಮೆ. ಬ್ರಹ್ಮವಾಯುಗಳು ಮಹಾಲಕ್ಷ್ಮಿಗಿಂತ ಕೋಟಿ ಗುಣ ಕಡಿಮೆ, ಸರಸ್ವತಿ, ಭಾರತಿಯರು ಬ್ರಹ್ಮ, ವಾಯುಗಳಿಗಿಂತ ನೂರು ಗುಣ ಕಡಿಮೆ. ಅವರಿಗಿಂತ ಗರುಡ, ಶೇಷ, ರುದ್ರರು ನೂರು ಗುಣ ಕಡಿಮೆ. ಈ ಬಗೆಯಲ್ಲಿ ಗುಣಗಳ ತಾರತಮ್ಯ ಚಿಂತನೆ ಮಹತ್ವ ಪಡೆದಿದೆ.

ಕಕ್ಷ್ಯಾತಾರತಮ್ಯವು ತಾರತಮ್ಯದ ಇನ್ನೊಂದು ಬಗೆ. ಸರ್ವೋತ್ತಮನಾದ ಶ್ರೀಹರಿಯದು ಪ್ರಥಮ ಕಕ್ಷ್ಯೆ, ಅಕ್ಷರ ಪುರುಷಳಾದ ಮಹಾಲಕ್ಷ್ಮೀಯದು ದ್ವಿತೀಯ ಕಕ್ಷ್ಯೆ, ಬ್ರಹ್ಮ ವಾಯುಗಳದು ತೃತೀಯ ಕಕ್ಷ್ಯೆ, ಸರಸ್ವತಿ ಭಾರತಿಯರು ಚತುರ್ಥ ಕಕ್ಷ್ಯೆ. ಐದನೆಯ ಕಕ್ಷ್ಯೆಯಲ್ಲಿ ಗರುಡ ಶೇಷ ರುದ್ರರು ಬರುವರು. ಬಳಿಕ ಷಣ್ಮಹಿಷಿಯರು, ಸುಪರ್ಣೀ, ವಾರುಣೀ ಪಾರ್ವತಿಯರು, ಇಂದ್ರ ಕಾಮರು ಮೊದಲಾದವರು ಕ್ರಮವಾಗಿ ಮುಂದಿನ ಕಕ್ಷ್ಯೆಗಳಲ್ಲಿ ಬರುವರು.

ಸಾಧನ ತಾರತಮ್ಯ ಇನ್ನೊಂದು ರೀತಿಯದು. ಎಂದರೆ ಆಯಾ ಪದವಿಗೆ ಅರ್ಹರಾದ ಜೀವರು ಪದವಿಯನ್ನು ಗಳಿಸಲು ಅಗತ್ಯವಾದ ಕಾಲ ಒಂದು ಬಗೆಯದಾದರೆ, ಪದವಿಯ ಬಳಿಕ ಮುಕ್ತರಾಗಲು ಅಗತ್ಯವಾದ ಕಾಲ ಇನ್ನೊಂದು ಬಗೆಯದು. ಋಜುಗಳದು ಪದವಿಗೆ ಪೂರ್ವದಲ್ಲಿ ನೂರು ಕಲ್ಪ ಬಳಿಕ ನೂರು ಕಲ್ಪ ಎಂಬುದು ಇದಕ್ಕೆ ನಿದರ್ಶನ. ಇತರ ದೇವತೆಗಳ ಬಗ್ಗೆಯೂ ಇಂತಹ ಸಾಧನಾ ತಾರತಮ್ಯವು ಉಕ್ತವಾಗಿದ್ದು ಅವುಗಳ ವಿವರ ಸರ್ವಮೂಲ ಗ್ರಂಥಗಳಲ್ಲಿ ಬಂದಿದೆ. ಅವುಗಳ ಒಟ್ಟು ಸಂಗ್ರಹವನ್ನು ಶ್ರೀಹರಿಕಥಾಮೃತಸಾರದ ಕಲ್ಪಸಾಧನ ಸಂಧಿಯಲ್ಲಿ ಕಾಣಬಹುದು.

ಸ್ವತಂತ್ರ ಹಾಗೂ ಅಸ್ವತಂತ್ರ ಎಂಬುದಾಗಿ ಎರಡು ಬಗೆಯ ವಿಭಾಗ ಮತ್ತೊಂದು ರೀತಿಯಲ್ಲಿ ತಾರತಮ್ಯದ ವಿವೇಚನೆ ಎಂಬುದು ತತ್ತ್ವಸಂಖ್ಯಾನದಲ್ಲಿ ಪ್ರತಿಪಾದಿತವಾಗಿದೆ. ಮಹಾವಿಷ್ಣು ಒಬ್ಬನೇ ಸ್ವತಂತ್ರ. ರಮಾ ಬ್ರಹ್ಮಾದಿ ಇತರರೆಲ್ಲರೂ ಅಸ್ವತಂತ್ರರು ಎಂಬುದು ಈ ವಿಭಾಗದ ವಿಶೇಷ ಮಹತ್ವ.

ದುಃಖಸ್ಪೃಷ್ಟರು ಹಾಗೂ ದುಃಖಾಸ್ಪೃಷ್ಟರು ಎಂಬುದಾಗಿ ಮತ್ತೊಂದು ರೀತಿಯಲ್ಲಿ ತಾರತಮ್ಯವನ್ನು ತಿಳಿಯಲು ಸಾಧ್ಯವಿದೆ. ದುಃಖಸ್ಪೃಷ್ಟರು ಎಂದರೆ ತಮ್ಮ ಜೀವನದ ಯಾವುದಾದರೂ ಹಂತದಲ್ಲಿ ದುಃಖದ ಸಂಪರ್ಕ ಹೊಂದಿದವರು ಎಂದರ್ಥ. ದುಃಖದ ಸಂಪರ್ಕವನ್ನು ಸರ್ವಥಾ ಎಂದರೆ ಯಾವುದೇ ರೀತಿಯಲ್ಲೂ ಯಾವುದೇ ಕಾಲದಲ್ಲೂ ಎಷ್ಟು ಮಾತ್ರಕ್ಕೂ ಸಹ ಹೊಂದದವರು ದುಃಖ ಅಸ್ಪೃಷ್ಟರು ಅಂತಹವರು ಮಹಾಲಕ್ಷ್ಮೀ ಹಾಗೂ ನಾರಾಯಣ ಇಬ್ಬರೇ. ನಾರಾಯಣನು ಸ್ವತಂತ್ರನಾಗಿದ್ದು ದುಃಖಾಸ್ಪೃಷ್ಟನಾಗಿದ್ದರೆ ಮಹಾಲಕ್ಷ್ಮಿಯು ಅವನಿಗೆ ಮಾತ್ರವೇ ಅಧೀನಳಾಗಿದ್ದು ಸರ್ವದಾ-ಸರ್ವಥಾ-ಸರ್ವತ್ರ-ಸರ್ವದುಃಖಾಸ್ಪೃಷ್ಟಳು ಎಂಬುದು ವಿಶೇಷ

ಬ್ರಹ್ಮ ವಾಯುಗಳು ಹಾಗೂ ಸರಸ್ವತಿ, ಭಾರತಿಯರು ಮೊದಲಾದ ಋಜುಗಳು ದುಃಖ- ಸ್ಪೃಷ್ಟರು ಎಂದರೆ ಇತರ ದೇವತೆಗಳಂತೆ ಯಾವುದೋ ಕಾರಣದಿಂದ ದುಃಖಾನುಭವಕ್ಕೆ ಒಳಗಾಗುವರು ಎಂಬ ಅರ್ಥದಲ್ಲಿ ಅಲ್ಲ; ಅವರಿಗೆ ಪರಮೋತ್ಸಾಹ ರೂಪ ಪೂರ್ಣಾನಂದದ ನ್ಯೂನತೆ ಮಾತ್ರವೇ ಅಂತಹ ದುಃಖಗಳ ಸ್ಪರ್ಶದ ಅರ್ಥ ಎಂದು ತಿಳಿಯಬೇಕು[೧].

ದೇವತೆಗಳು, ಋಷಿಗಳು, ಪಿತೃಗಳು, ಚಕ್ರವರ್ತಿಗಳು ಹಾಗೂ ಮನುಷ್ಯೋತ್ತಮರು ಎಂಬುದು ತಾರತಮ್ಯದ ಅತ್ಯಂತ ಸ್ಥೂಲರೂಪಗಳಲ್ಲೊಂದು: ದೇವರ್ಷಿಪಿತೃಪನರಾ ಇತಿ ಮುಕ್ತಾಸ್ತು ಪಂಚಧಾ। ಏವಂ ವಿಮುಕ್ತಿಯೋಗ್ಯಾಶ್ಚ। (ತತ್ತ್ವಸಂಖ್ಯಾನ)

ಇನ್ನು ದೇವತೆಗಳ ಅವತಾರಗಳಲ್ಲಿ ಸಹ ತಾರತಮ್ಯವು ಸಾಮಾನ್ಯವಾಗಿ ಮೂಲರೂಪಕ್ಕೆ ಅನುಗುಣವಾಗಿಯೇ ಇರುವುದು. ಆದರೆ ವರ, ಆವೇಶ, ಶಾಪ ಮೊದಲಾದ ಕಾರಣದಿಂದ ಅವತಾರದ ಸಮಯದಲ್ಲಿ ತಾರತಮ್ಯದಲ್ಲಿ ವ್ಯತ್ಯಾಸವಾದಂತೆ ಕಾಣುವುದು. ಆದರೆ ಅದು ಸ್ವಾಭಾವಿಕವಾದುದಲ್ಲ, ವರ, ಆವೇಶ ಮೊದಲಾದ ನಿಮಿತ್ತದಿಂದ ಉಂಟಾಗುವಂತಹುದು. ಆದ್ದರಿಂದ ಅದು ಸ್ವಾಭಾವಿಕ ತಾರತಮ್ಯಕ್ಕೆ ಬಾಧಕವೆನಿಸದು. ಉದಾಹರಣೆಗೆ ಮಹಾಭಾರತದಲ್ಲಿ ರುದ್ರಾವತಾರರಾದ ಅಶ್ವತ್ಥಾಮರು ಇಂದ್ರಾವತಾರನಾದ ಅರ್ಜುನನನ್ನು ಪರಾಭವಗೊಳಿಸಲು ಸಾಧ್ಯವಾಗದೇ ಹೋದದ್ದು ಕೆಲವೊಮ್ಮೆ ಅವರೇ ಪರಾಭವಗೊಳ್ಳುವುದು ಮೊದಲಾದವುಗಳನ್ನು ಇದರಂತೆ ತಿಳಿಯಬೇಕು[೨]. ಅರ್ಜುನನ ಆ ರೀತಿಯ ಯಶಸ್ಸಿಗೆ ಅವನಲ್ಲಿದ್ದ ನರರೂಪದ ಶೇಷನ ಅಂಶ; ವೀರನಾಮಕ ವಾಯುದೇವರ ಆವೇಶ, ಶ್ರೀಹರಿಯ ವಿಭೂತಿ ರೂಪ ಮೊದಲಾದವುಗಳು ಒಂದು ರೀತಿಯಲ್ಲಿ ಕಾರಣವಾದರೆ ಅವನಿಗಿದ್ದ 'ಹನುಮದ್ಧ್ವಜದ ಅಭೇದ್ಯವಾದ ರಥ', ಅಭೇದ್ಯವಾದ ಕುದುರೆಗಳು, ಗಾಂಡೀವ ಧನಸ್ಸು, ಅಕ್ಷಯ ಬತ್ತಳಿಕೆಗಳು ಹಾಗೂ ಎಲ್ಲಕ್ಕಿಂತ ಮುಖ್ಯವಾಗಿ ಭಗವಂತನಾದ ಶ್ರೀಕೃಷ್ಣನ ಸಾರಥ್ಯ ಇವು ಕಾರಣವಾದವು. ಇವುಗಳಾವುವೂ ಇಲ್ಲದ ಕಾರಣದಿಂದ ಅಶ್ವತ್ಥಾಮರು ಇಂದ್ರನಿಗಿಂತ ಉತ್ತಮ ಕಕ್ಷೆಯವರಾದರೂ ಸಹ ಅರ್ಜುನನ ಮೇಲೆ ಗೆಲುವು ಸಾಧಿಸುವುದು ಅಸಾಧ್ಯವೆನ್ನಿಸಿತು. ಇದು ಅವರ ಸ್ವರೂಪ ತಾರತಮ್ಯಕ್ಕೆ ಬಾಧಕವೆನಿಸಲಾರದು. ಅದರಂತೆ ಇಂದ್ರಾವತಾರನಾದ ಅರ್ಜುನನಿಗಿಂತ ಸೂರ್ಯಾವತಾರಿಯಾದ ಕರ್ಣ ತಾರತಮ್ಯದಲ್ಲಿ ಕಡಿಮೆ ಕಕ್ಷ್ಯೆಗೆ ಸೇರಿದವನು. ಆದರೆ ಕರ್ಣನ ಮೇಲಿನ ಗೆಲುವು ಅರ್ಜುನನಿಗೆ ಸುಲಭ ಸಾಧ್ಯವೆನಿಸಲಿಲ್ಲ ಎಂಬುದು ಮಹಾಭಾರತದಲ್ಲಿ ನಿರೂಪಿತವಾಗಿರುವ ಅಂಶ. ಇದಕ್ಕೆ ಕರ್ಣನಲ್ಲಿ ಮುಖ್ಯವಾಗಿ ಇದ್ದ ಶ್ರೀಹರಿಯ ಸನ್ನಿಧಾನ ವಿಶೇಷವೂ ಒಂದು ಕಾರಣವಾದರೆ ಅವನು ಸಾಕ್ಷಾತ್ ಭಗವದವತಾರರಾದ ಪರಶುರಾಮರ ಬಳಿ ಸಾಕ್ಷಾತ್ ಶಿಷ್ಯತ್ವ ವಹಿಸಿ ಶಸ್ತ್ರಾಸ್ತ್ರಗಳನ್ನು ಅಭೇದ್ಯವಾದ ವಿಜಯ ರಥವನ್ನು ಬತ್ತಳಿಕೆಗಳನ್ನು ವಿಜಯ ಧನುಸ್ಸನ್ನು ಬಹಳ ಮುಖ್ಯವಾಗಿ

---

೧. ಋಜೂನಾಮೇಕ ಏವಾಸ್ತಿ ಪರಮೋತ್ಸಾಹವರ್ಜನಮ್।
ಸ ಗುಣಾಲ್ಪತ್ವಮಾತ್ರತ್ವಾನ್ನರ್ಜುತ್ವೇನ ವಿರುಧ್ಯತೇ। - ಅನುವ್ಯಾಖ್ಯಾನ

೨. ಅಕ್ಷಯಾವಿಷುಧೀ ದಿವ್ಯೋ ಧ್ವಜೋ ವಾನರಲಕ್ಷಣಃ।
ಗಾಂಡೀವಂ ಧನುಷಾಂ ಶ್ರೇಷ್ಠಂ ತೇನ ದ್ರೌಣೇರ್ವರೋಽರ್ಜುನಃ॥ -ಮ.ಭಾ.ತಾ.ನಿ (೨/೭೮)

ಸ್ಪರ್ಧೆ ತೊರೆದು ಹೋರಾಡುವಾಗ ಗೆಲುವು ನಿಶ್ಚಿತ ಎಂಬ ವಿಶೇಷವರವನ್ನು ಪಡೆದುಕೊಂಡಿದ್ದುದು ಕಾರಣವಾಗಿದ್ದಿತು.

ಈ ನಿದರ್ಶನದಿಂದ ದೇವತೆಗಳ ಅವತಾರದಲ್ಲಿ ತಾರತಮ್ಯಕ್ಕೆ ಭಂಗ ಒದಗುವಂತಹ ಸಕಲ ಪ್ರಸಂಗಳನ್ನೂ ಸಹ ಅರ್ಥೈಸಿಕೊಳ್ಳಬೇಕು.

ದೇವತೆಗಳ ಮೂಲ ರೂಪದ ಶಕ್ತಿ ಸಾಮರ್ಥ್ಯಾದಿಗಳು ಅವರ ಅವತಾರ ರೂಪದಲ್ಲಿ ಪೂರ್ಣ ಪ್ರಮಾಣದಲ್ಲಿ ಕಾಣಿಸಿಕೊಳ್ಳುವುದಿಲ್ಲ ಎಂಬುದು ಇನ್ನೊಂದು ರೀತಿಯಾದ ತಾರತಮ್ಯದ ವಿವೇಚನೆ. ಪರದೇವತೆಯಾದ ಶ್ರೀಹರಿ ಹಾಗೂ ಅಕ್ಷರ ಪುರುಷಳಾದ ಮಹಾಲಕ್ಷ್ಮೀ ಇವರಿಬ್ಬರಿಗೂ ಸಹ ಯಾವುದೇ ರೂಪದಲ್ಲೂ ಅವತಾರಾದಿಗಳಲ್ಲೂ ಶಕ್ತಿ ವ್ಯತ್ಯಾಸಗಳು ಎಷ್ಟು ಮಾತ್ರಕ್ಕೂ ಇರುವುದಿಲ್ಲ ಎಂಬುದು ವಿಶೇಷ. ಇತರ ದೇವತೆಗಳ ಅವತಾರಗಳಲ್ಲಿ ಶಕ್ತಿ ವ್ಯತ್ಯಾಸ ಅನಿವಾರ್ಯ; ಅದು ಅವರು ಅವತರಿಸುವ ಯುಗ ಹಾಗೂ ಅವರ ಮೂಲರೂಪದ ಯೋಗ್ಯತೆಗೆ ಅನುಗುಣವಾಗಿ ವ್ಯತ್ಯಾಸ ಹೊಂದುವುದು. ವಾಯುದೇವರ ಅವತಾರದಲ್ಲಿ ಮಾತ್ರ ವಿಶೇಷವಿದೆ. ಅವರಿಗೂ ಲಕ್ಷ್ಮೀನಾರಾಯಣರಂತೆ ಮೂಲರೂಪದ ಶಕ್ತಿ ಸಾಮರ್ಥ್ಯಗಳೇ ಅವತಾರ ರೂಪದಲ್ಲೂ ಸಹ ತಪ್ಪದೇ ಇರುವುವು. ಅದರಲ್ಲೂ ಅವರು ಸ್ವೇಚ್ಛೆಯಿಂದಲೇ ಮೂಲರೂಪದ ಶಕ್ತಿ ಸಾಮರ್ಥ್ಯಗಳನ್ನು ಪ್ರಕಾಶನ ಪಡಿಸಬಹುದು; ಆದರೆ ಅವರಿಗೆ ಅಂತಹ ಅವಕಾಶದ ಅಗತ್ಯವೇ ಇರುವುದಿಲ್ಲ ಎಂಬುದು ಮತ್ತೊಂದು ವಿಶೇಷ[೧].

ಆದಿಶೇಷನ ಅವತಾರನಾದ ಲಕ್ಷ್ಮಣನಲ್ಲಿ ಕಾಲಾದಿಗಳಿಗೆ ತಕ್ಕಂತೆ ಶಕ್ತಿ ವ್ಯತ್ಯಾಸ ಹೊಂದಿದ್ದಿತು. ಆದರಿಂದಾಗಿಯೇ ರಾವಣನೊಂದಿಗೆ ನಡೆದ ಯುದ್ಧದಲ್ಲಿ ಅವನು ಮೂರ್ಛಿತನಾಗುವಂತಾಯಿತು; ಅಲ್ಲದೇ ರಾವಣನ ವಶವಾಗುವಂತಹ ಪರಿಸ್ಥಿತಿಯೂ ಒದಗಿತು. ಆದರೆ ಆ ಕಾಲಕ್ಕೆ ಅವನಿಗೆ ಎಚ್ಚರ ಬಂದು ಕೂಡಲೇ ತನ್ನ ಮೂಲರೂಪವನ್ನು ಸ್ಮರಿಸಿ ಅದರ ಶಕ್ತಿ ಸಾಮರ್ಥ್ಯವನ್ನು ಪಡೆದುಕೊಳ್ಳುವ ಮೂಲಕ ಅಂತಹ ಅಪಾಯದಿಂದ ಪಾರಾಗುವ ವಿವರ ಮಹಾಭಾರತತಾತ್ಪರ್ಯನಿರ್ಣಯದಲ್ಲಿ ಬಂದಿದೆ. ಇಂತಹ ಪ್ರಸಂಗ ವಾಯುದೇವರ ಯಾವ ಅವತಾರಗಳಲ್ಲಿಯೂ ಸಹ ಒದಗಲಿಲ್ಲ ಎಂಬುದು ವಿಶೇಷ. ಲಕ್ಷ್ಮಣ ಹಾಗೆ ಮಾಡಿದ್ದರಿಂದ ರಾವಣನ ವಶವಾಗುವ ಅಪಾಯವನ್ನು ತಪ್ಪಿಸಿಕೊಂಡ ಎಂಬುದು ನಿಜ. ಆದರೆ ಹಾಗೆ ಮೂಲರೂಪವನ್ನು ಸ್ಮರಿಸಿಕೊಳ್ಳುವ ಮೂಲಕ ಅಂತಹ ಸಾಧನೆಯನ್ನು ಮಾಡುವುದು ಅವರ ಸಾಧನೆಯ ಹಿರಿಮೆಗೆ ಭೂಷಣವೆನ್ನಿಸುವುದಿಲ್ಲ ಎಂಬುದು ಗಮನಿಸಬೇಕಾದ ಮತ್ತೊಂದು ಅಂಶ.

---

೧. ಸರ್ವೇ ಗುಣಾ ಆವೃತಾ ಮಾನುಷತ್ವೇ ಯುಗಾನುಸಾರಾನ್ಮೂಲರೂಪಾನುಸಾರಾತ್ ।
ಕ್ರಮಾತ್ ಸುರಾಣಾಂ ಭಾಗತೋ ವ್ಯಕ್ತರೂಪಾ ಆದಾನತೋ ವ್ಯಕ್ತಿಮಾಯಾಂತ್ಯರೂಣಾಮ್ ॥
ನೈವಾವ್ಯಕ್ತಿಃ ಕಾಚಿದಸ್ತೀಹ ವಿಷ್ಣೋಃ ಪ್ರಾದುರ್ಭಾವೇಷ್ವತಿಸುವ್ಯಕ್ತಶಕ್ತೇಃ ।
ಇಚ್ಛಾವ್ಯಕ್ತಿಃ ಪ್ರಾಯಶೋ ಮಾರುತಸ್ಯ ತದನ್ಯೇಷಾಂ ವ್ಯಕ್ತತಾ ಕಾರಣೇನ ॥
- ಮ.ಭಾ.ತಾ.ನಿ (೨೨/೨೮೪,೨೮೫)

ಅರ್ಜುನನ ಹಿರಿಮೆ ಹಾಗೆ ಆವೇಶಾದಿಗಳಿಂದ ಆ ಕಾಲದಲ್ಲಿ ಮಿಗಿಲೆನಿಸುವಂತೆ ಕಂಡರೂ ಅದು ಸದಾ ಇರುವಂತಹುದಲ್ಲ. ಅದು ಆ ಅವತಾರ ಸನ್ನಿವೇಶ ಮೊದಲಾದವುಗಳಿಗಷ್ಟೇ ಸೀಮಿತವಾದುದು. ಆದರಿಂದಾಗಿ ಅದು ಅವರವರ ಸಹಜ ವ್ಯಕ್ತಿತ್ವದ ವ್ಯತ್ಯಾಸಕ್ಕೆ ಕಾರಣವೆನ್ನಿಸದು.

ಸ್ತ್ರೀಯರಲ್ಲೂ ಸಹ ತಾರತಮ್ಯಕ್ಕೆ ಜ್ಞಾನಭಕ್ತ್ಯಾದಿಗಳೇ ನಿರ್ಣಾಯಕ. ಆದರೆ, ಅವು ಕಣ್ಣಿಗೆ ಗೋಚರಿಸದ ಗುಣಗಳಾದ್ದರಿಂದ ಅವರ ರೂಪವೇ ಅವರಲ್ಲಿಯ ತಾರತಮ್ಯಕ್ಕೆ ನಿರ್ಣಾಯಕ ಎಂಬುದು ಇನ್ನೊಂದು ವಿಶೇಷಾಂಶ. ಇದರಿಂದಾಗಿ ಸೀತಾ, ರುಗ್ಮಿಣೀ, ಸತ್ಯಭಾಮಾ ಮೊದಲಾದ ಮಹಾಲಕ್ಷ್ಮಿಯ ರೂಪಗಳ ಹಿರಿಮೆಯು ಅತ್ಯಂತ ಮಿಗಿಲು ಎಂದು, ಆ ಬಳಿಕ ಭಾರತೀ ಅವತಾರಳಾದ ದ್ರೌಪದೀ ಮೊದಲಾಗಿ ಇತರರದು ಎಂದು ಸ್ಪಷ್ಟಪಡುವುದು[೧].

ಸ್ವಭಾವತಃ ದೇವತೆಗಳಾಗಿದ್ದರೂ ಅಸುರರ ಆವೇಶ, ಶಾಪ ಮೊದಲಾದ ಕಾರಣದಿಂದ ದೈತ್ಯರಂತೆ ವರ್ತಿಸುವ ರೀತಿ ಇನ್ನೊಂದು ಬಗೆಯದು. ತುಂಬುರು ಎಂಬ ಗಂಧರ್ವನ ಅವತಾರನಾದ ವಿರಾಧ ಎಂಬ ರಾಕ್ಷಸ, ದನುಗಂಧರ್ವನ ಅವತಾರನಾದ ಕಬಂಧ ಎಂಬ ರಾಕ್ಷಸ ಮೊದಲಾದವರು ಈ ಗುಂಪಿನವರು.

ದೇವತೆಗಳಲ್ಲಿ ತಾರತಮ್ಯ ಹೇಗೋ ದೈತ್ಯರಲ್ಲಿಯೂ ತಾರತಮ್ಯವು ಇರುವುದು. ಭಕ್ತಿ ಜ್ಞಾನಾದಿಗಳ ಕಾರಣದಿಂದಾಗಿ ದೇವತೆಗಳಲ್ಲಿ ತಾರತಮ್ಯ ಇರುವಂತೆ ದ್ವೇಷ, ಮಿಥ್ಯಾ- ಜ್ಞಾನಾದಿಗಳ ಕಾರಣದಿಂದಾಗಿ ದೈತ್ಯರಲ್ಲಿ ತಾರತಮ್ಯ ಇರುವುದು. ಎಂದರೆ ಗುಣದಿಂದ ದೇವತೆಗಳು ತಾರತಮ್ಯದಲ್ಲಿ ಮಿಗಿಲೆನ್ನಿಸುತ್ತಾ ಹೋಗುವಂತೆ ದೋಷಗಳಿಂದಾಗಿ ದೈತ್ಯರು ತಾರತಮ್ಯದಲ್ಲಿ ಹೆಚ್ಚು ಹೆಚ್ಚಾಗಿ ಕೀಳೆನಿಸುತ್ತಾ ಹೋಗುವರು. ಎಂದರೆ ತಾರತಮ್ಯದಲ್ಲಿ ಪ್ರಬಲರೆನಿಸುವಂತಹ ದೈತ್ಯರಲ್ಲಿ ಅವರ ಕೆಳಗಿನ ಹಂತದ ದೈತ್ಯರಿಗಿಂತ ಮಿಗಿಲಾದ ಭಗವದ್ವೇಷಾದಿ ದೋಷಗಳು ತುಂಬಿರುವವು ಎಂದರ್ಥ.

ಕಲಿಯು ತಾರತಮ್ಯದಲ್ಲಿ ದೈತ್ಯಶ್ರೇಣಿಯಲ್ಲಿ ಅತ್ಯಂತ ನಿಕೃಷ್ಟನಾದವನು. ಎಂದರೆ ಅವನಲ್ಲಿ ಇರುವ ಭಗವದ್ದ್ವೇಷ ಮಿಥ್ಯಾಜ್ಞಾನಾದಿ ದೋಷಗಳು ಇತರ ಎಲ್ಲಾ ದೈತ್ಯರಿಗಿಂತ ಹೆಚ್ಚಿನ

೧. ಪ್ರಾಯೋ ವೇತ್ತುಂ ನ ಶಕ್ಯಂತೇ ಭಕ್ತ್ಯಾದ್ಯಾಃ ಸ್ತ್ರೀಷು ಯತ್ ತತಃ।
ಯಾಸಾಂ ರೂಪಂ ಗುಣಾಸ್ತಾಸಾಂ ಭಕ್ತ್ಯಾದ್ಯಾ ಇತಿ ನಿಶ್ಚಯಃ॥
ತಚ್ಚ ನೈಸರ್ಗಿಕಂ ರೂಪಂ ದ್ವಾತ್ರಿಂಶಲ್ಲಕ್ಷಣೈರ್ಯುತಮ್।
ನಾಲಕ್ಷಣಂ ವಪುರ್ಮಾತ್ರಂ ಗುಣಹೇತುಃ ಕಥಂಚನ ॥
ಆಸುರೀಣಾಂ ವರಾದೇಸ್ತು ವಪುರ್ಮಾತ್ರಂ ಭವಿಷ್ಯತಿ।
ನ ಲಕ್ಷಣಾನ್ಯತಸ್ತಾಸಾಂ ನೈವ ಭಕ್ತಿಃ ಕಥಂಚನ ॥
ತಸ್ಮಾದ್ ರೂಪಗುಣೋದಾರಾ ಜಾನಕೀ ರುಗ್ಮಿಣೀ ತಥಾ।
ಸತ್ಯಭಾಮೇತ್ಯಾದಿರೂಪಾ ಶ್ರೀಃ ಸರ್ವಪರಮಾ ಮತಾ ॥
ತತಃ ಪಶ್ಚಾತ್ ದ್ರೌಪದೀ ಚ ಸರ್ವಾಭ್ಯೋ ರೂಪತೋ ವರಾ।
ಭೂಭಾರಕ್ಷಪಣೇ ಸಾಕ್ಷಾದಂಗಂ ಭೀಮವದೀಶಿತುಃ ॥
ಹಂತಾ ಚ ವೈರಹೇತುಶ್ಚ ಭೀಮಃ ಪಾಪಜನಸ್ಯ ತು।
ದ್ರೌಪದೀ ವೈರಹೇತುಃ ಸಾ ತಸ್ಮಾದ್ಭೀಮಾದನಂತರಾ ॥ - ಮ.ಭಾ.ತಾ.ನಿ. (೨/೩೭-೪೨)

ಪ್ರಮಾಣದವುಗಳಾಗಿರುವವು ಎಂದರ್ಥ. ವಾಯುದೇವರು ದೇವತೆಗಳಲ್ಲಿ ಉತ್ತಮರಾಗಿ ಜೀವೋತ್ತಮರೆನ್ನಿಸಿರುವಂತೆ, ಕಲಿಯು ದೈತ್ಯರಲ್ಲಿ ಅತ್ಯಂತ ದೋಷಪೂರ್ಣ ಎಂಬ ಕಾರಣದಿಂದ ಜೀವಾಧಮ ಎನ್ನಿಸಿರುವನು.

ದೇವದೈತ್ಯರ ಮೂಲರೂಪಗಳ ತಾರತಮ್ಯವನ್ನು ಸ್ಫುಟವಾಗಿ ತಿಳಿದ ಬಳಿಕ ಅವರ ಅವತಾರ-ದಲ್ಲಿನ ತಾರತಮ್ಯವನ್ನು ವಿವೇಚಿಸುವಾಗ ಈ ಎಲ್ಲಾ ಕಾರಣಗಳನ್ನೂ ಸಹ ತಪ್ಪದೇ ಅನ್ವ-ಯಿಸಿಕೊಳ್ಳಬೇಕು. ಕೆಲವೊಮ್ಮೆ ಕಡಿಮೆಯ ದೈತ್ಯರು ತಮಗಿಂತ ಪ್ರಬಲರಾದ ದೈತ್ಯರಿಗಿಂತ ಪ್ರಬಲರೆನಿಸುವಂತೆ ಕಾಣುವುದು ಅದಕ್ಕೆ ಅವರಿಗೆ ಅವತಾರದಲ್ಲಿ ವಿಶೇಷ ತಪಸ್ಸು ಮೊದಲಾದ ಕಾರಣದಿಂದ ಒದಗಿದ ವರ ಎಂದು ತಿಳಿಯಬೇಕು. ಅಂತಹ ವರಗಳೂ ಸಹ ಅವಧ್ಯತ್ವ ರೂಪ ಮೊದಲಾದ ಸ್ವರೂಪದವು ಒಂದು ಬಗೆಯವಾದರೆ ಅವರ ಬಳಿ ಇರುವ ಅಯುಧಗಳಿಗೆ ಇರುವ ವರಾದಿಗಳು ಮತ್ತೊಂದು ಬಗೆಯದು. ರಾಮಾಯಣದಲ್ಲಿ ಕುಂಭನ ಬಳಿ ಇದ್ದ ಪ್ರಾಸ ಎಂಬ ಅಯುಧ, ಮಹಾಭಾರತದ ಶ್ರುತಾಯುಧನೆಂಬುವನ ಬಳಿ ಇದ್ದ ವರುಣ ನೀಡಿದ್ದ ಅಮೋಘವಾದ ಗದೆ ಮೊದಲಾದವುಗಳು ಇದಕ್ಕೆ ನಿದರ್ಶನ. ಕರ್ಣನ ಬಳಿ ಇದ್ದ ಇಂದ್ರದತ್ತವಾದ ಶಕ್ತ್ಯಾಯುಧ ಅವನ ವಿಶೇಷತೆಗೆ ಕಾರಣವಾಗಿತ್ತು. ದೈತ್ಯ ಪಕ್ಷ ವಹಿಸಿದ ದೇವಾವತಾರರಲ್ಲಿ ಕಾಣುವಂತಹ ಒಂದು ವಿಶೇಷ. ಸ್ವತಃ ದೇವತಾವತಾರನಾಗಿದ್ದರೂ ಕೌರವರಂತಹ ದೈತ್ಯರ ಪಕ್ಷವಹಿಸಿದ್ದು ಕರ್ಣನ ಪಾತ್ರದಲ್ಲಿ ಗೋಚರಿಸುವ ಒಂದು ವಿಶೇಷಾಂಶ.

ತಾಟಕಿಯು ಬ್ರಹ್ಮ ವರದಿಂದಾಗಿ ಅವಧ್ಯಳೆನಿಸಿದ ಪ್ರಸಂಗ ಒಂದು ಬಗೆಯದಾದರೆ, ಬಕಾಸುರ ಹಿಡಿಂಬಾಸುರ ಮೊದಲಾದವರು ಶಿವನ ವರದಿಂದಾಗಿ ಅವಧ್ಯರಾಗಿದ್ದುದು ವರಬಲದಿಂದ ಒದಗುವ ತಾತ್ಕಾಲಿಕ ಹಿರಿಮೆಗೆ ನಿದರ್ಶನ.,

ಸ್ವಭಾವತಃ ಅಸುರರಾಗಿದ್ದರೂ ಸಹ ರೂಪ ಲಾವಣ್ಯಗಳಲ್ಲಿ ದೇವತೆಗಳಂತೆ ಕಾಣುವ ರೀತಿ ಇನ್ನೊಂದು ರೀತಿಯದು. ಸ್ವಭಾವತಃ ತಾಟಕಿ ಅವತಾರಳಾದ ಪೂತನಿಯು ಸುಂದರ ವೇಷದಲ್ಲಿ ಬರಲು ಕಾರಣವಾಗಿದ್ದುದು, ಶ್ರೀ ಕೃಷ್ಣನ ಸ್ಪರ್ಶ ಮಾಡುವಂತಹ ಸುಯೋಗವನ್ನು ಪಡೆದಿದ್ದುದು ಅವಳ ಒಳಗಿದ್ದ ಊರ್ವಶೀ ಎಂಬ ಅಪ್ಸರೆಯ ಆವೇಶದ ಕಾರಣದಿಂದಾಗಿ ಎಂಬುದು ಇಂತಹ ಪ್ರಸಂಗ.

ತಾರತಮ್ಯದ ವಿವೇಚನೆಯಲ್ಲಿ ಆರೋಹಣ ಕ್ರಮ, ಅವರೋಹಣ ಕ್ರಮ ಎಂಬ ಎರಡು ಕ್ರಮಗಳು ಮಹತ್ವ ಪಡೆದಿವೆ. ಕಡಿಮೆ ದೇವತೆಯಾದ ಪುಷ್ಕರನಿಂದ ಪ್ರಾರಂಭಿಸಿ ಸರ್ವೋತ್ತಮನಾದ ಶ್ರೀಹರಿಯವರೆಗೆ ಚಿಂತಿಸುವ ತಾರತಮ್ಯವು ಆರೋಹಣ ಕ್ರಮದ ತಾರತಮ್ಯವಾದರೆ. ಸರ್ವೋತ್ತಮ ದೇವತೆಯಾದ ಶ್ರೀಹರಿಯಿಂದ ಪ್ರಾರಂಭಿಸಿ ಪುಷ್ಕರನವರೆಗೆ ಚಿಂತಿಸುವ ತಾರತಮ್ಯವು ಅವರೋಹಣ ತಾರತಮ್ಯ ಎನ್ನಿಸುವುದು.

ತಾರತಮ್ಯಪರಿಜ್ಞಾನಪೂರ್ವಕವಾಗಿಯೇ ದೇವತೆಗಳ ಆರಾಧನೆ ವಿಹಿತ. ತಾರತಮ್ಯಕ್ಕೆ ಅನುಗುಣವಾಗಿ ಅವರಿಗೆ ಶ್ರೀಹರಿ-ಗುರುಗಳಲ್ಲಿ ಭಕ್ತ್ಯತಿಶಯವು ಕಂಡುಬರುವುದು. ಅವರ ಭಕ್ತಿ

ಮೊದಲಾದ ಸಾಧನೆಗೆ ಅನುಗುಣವಾಗಿಯೇ ಶ್ರೀಹರಿಯ ಅನುಗ್ರಹ ಅವರಿಗೆ ಲಭಿಸುವುದು. ತಾರತಮ್ಯದಲ್ಲಿ ಮಿಗಿಲಾದವರ ಮೇಲೆ ಶ್ರೀಹರಿಗೆ ಹೆಚ್ಚಿನ ಪ್ರೀತಿ. ಆದ್ದರಿಂದಲೇ ಉತ್ತಮ ದೇವತೆಗಳ ಮೇಲೆ ಉತ್ತಮ ಭಕ್ತಿಯನ್ನೇ ಮಾಡಬೇಕು. ಶ್ರೀಹರಿಯು ಸರ್ವೋತ್ತಮನಾದ್ದರಿಂದ ಅವನಲ್ಲಿ ಎಲ್ಲರಿಗಿಂತ ಮಿಗಿಲಾದ ಹೆಚ್ಚಿನ ಭಕ್ತಿಯನ್ನು ಆ ಬಳಿಕ ರಮಾ-ಬ್ರಹ್ಮಾದಿದೇವತೆಗಳಲ್ಲಿ ತಾರತಮ್ಯಜ್ಞಾನಪೂರ್ವಕವಾದ ಭಕ್ತಿಯನ್ನು ಮಾಡುವುದು ಮುಕ್ತಿಗೆ ಖಚಿತವಾದ ಸಾಧನ[೧]. ಹೀಗೆ ತಾರತಮ್ಯವನ್ನು ಸರಿಯಾಗಿ ತಿಳಿಯದೇ ಮಾಡುವ ದೇವತಾರಾಧನೆ, ಗುರವಾರಾಧನೆಗಳು ಸೂಕ್ತ ಫಲವನ್ನು ನೀಡಲಾರವು. ಬದಲಾಗಿ ವ್ಯತಿರಿಕ್ತ ಫಲವನ್ನೇ ನೀಡಿ, ಅನರ್ಥಕ್ಕೂ ಕಾರಣವಾಗುವವು. ಆದ್ದರಿಂದ ತಾರತಮ್ಯದ ಪರಿಜ್ಞಾನ ಉಪಾಸನೆಗೆ ಅತ್ಯಂತ ಅಗತ್ಯವಾದುದು.

ದೇವತೆಗಳ ಸೃಷ್ಟಿ ಹಾಗೂ ಲಯ ಇವುಗಳಲ್ಲೂ ಸಹ ತಾರತಮ್ಯ ಸ್ಫುಟವಾಗಿ ನಿರೂಪಿತವಾಗುವುದು. ಶ್ರೇಷ್ಠ ದೇವತೆಗಳು ಹುಟ್ಟು ಮೊದಲು ನಡೆದು ಆ ಬಳಿಕ ಅವರಿಗಿಂತ ಕಡಿಮೆಯಾದ ದೇವತೆಗಳ ಹುಟ್ಟು ನಡೆಯುವುದು. ಆದ್ದರಿಂದ ಸೃಷ್ಟಿಯಲ್ಲಿ ಮೊದಲು ಹುಟ್ಟಿದ ದೇವತೆಗಳು, ಆ ಬಳಿಕ ಹುಟ್ಟುವ ದೇವತೆಗಳಿಗಿಂತ ತಾರತಮ್ಯದಲ್ಲಿ ಮಿಗಿಲಾದವರು. ಲಯದ ಕ್ರಮ ಇದಕ್ಕೆ ವಿರುದ್ಧ ರೀತಿಯದು. ಕೊನೆಯಲ್ಲಿ ಹುಟ್ಟಿದ ದೇವತೆಯ ಲಯ ಮೊದಲಿಗೆ ನಡೆದು ಅನಂತರ ಹುಟ್ಟಿದ ದೇವತೆಗಳ ಲಯ ಆ ಬಳಿಕ ನಡೆಯುವುದು. ಕೊನೆಗೆ ಲಯ ಹೊಂದುವ ದೇವತೆ ಅತ್ಯಂತ ಶ್ರೇಷ್ಠ ಬ್ರಹ್ಮದೇವರಲ್ಲಿ ಇತರ ಸಕಲ ದೇವತೆಗಳೂ ಲಯ ಹೊಂದುವುದರಿಂದ ಅವರು ಜೀವೋತ್ತಮರು ಎಂದಾಗುವುದು. ಮಹಾಲಕ್ಷ್ಮಿಗೆ ಲಯ ಎಂಬುದಿಲ್ಲ. ಪ್ರಳಯ ಕಾಲದಲ್ಲೂ ಭಗವಂತನಾದ ಶ್ರೀಹರಿಯೊಂದಿಗೆ ಆಲಿಂಗಿತಳಾಗಿಯೇ ಇರುವುದು ಅವರ ವಿಶೇಷ[೨].

ತತ್ತ್ವಗಳ ಸೃಷ್ಟಿಯು ಇದೇ ತೆರನಾದದ್ದು. ಅವ್ಯಕ್ತ ತತ್ತ್ವದಿಂದ ಮಹತ್ತತ್ತ್ವಾದಿಗಳ ಸೃಷ್ಟಿ ನಡೆಯುವುದು. ತತ್ತ್ವಾಭಿಮಾನಿ ದೇವತೆಗಳು ಈ ಕ್ರಮಕ್ಕೆ ಅನುಗುಣವಾಗಿಯೇ ತಾರತಮ್ಯ ಭಾವವನ್ನು ಹೊಂದಿರುವರು.

---

೧. ವಿಷ್ಣೋರತ್ಯುತ್ತಮತ್ವಾದಖಿಲಗುಣಗಣೈಸ್ತತ್ರ ಭಕ್ತಿಂ ಗರಿಷ್ಠಾಂ
ಸಂಶ್ಲಿಷ್ಟೇ ಶ್ರೀಧರಾಭ್ಯಾಮಮುಮಥ ಪರಿವಾರಾತ್ಮನಾ ಸೇವಕೇಷು।
ಯಃ ಸಂಧತ್ತೇ ವಿರಿಂಚಿಶ್ವಸನವಿಹಗಪಾನಂತರುದ್ರೇಂದ್ರಪೂರ್ವೇ-
ಷ್ವಾಧ್ಯಾಯಂಸ್ತಾರತಮ್ಯಂ ಸ್ಫುಟಮವತಿ ಸದಾ ವಾಯುರಸ್ಮದ್ಗುರುಸ್ತಮ್ ॥
– ಶ್ರೀಹರಿವಾಯುಸ್ತುತಿ (೧೫)

೨. ಸೃಷ್ಟೌ ಲಯೇ ತಾರತಮ್ಯಂ ದೇವಾನಾಂ ಜ್ಞಾಯತೇ ಸ್ಫುಟಮ್।
ತಾರತಮ್ಯಪರಿಜ್ಞಾನೇ ಮಹಾತಾತ್ಪರ್ಯಮಿಷ್ಯತೇ॥
ಅತಸ್ತದ್ಬಹುಶಸ್ಸೂಕ್ತಮನ್ಯತ್ರೈತತ್ಪ್ರಕಾಶನಮ್ ॥ ಇತಿ ವಾಮನೇ। – ಭಾ.ತಾ.(೩/೨೦/೧೫)
ಸರ್ವಾವಸ್ಥಾಪ್ರೇರಕಶ್ಚ ಸರ್ವರೂಪೇಷ್ವಭೇದವಾನ್ ॥ – ಅಣುಭಾಷ್ಯ
ಸರ್ವದೇಶೇಷು ಕಾಲೇಷು ಸ ಏಕಃ ಪರಮೇಶ್ವರಃ।
ತದ್ಭಕ್ತಿತಾರತಮ್ಯೇನ ತಾರತಮ್ಯಂ ವಿಮುಕ್ತಿಗಮ್ ॥ – ಗೀತಾಭಾಷ್ಯ

ದೇವತಾತಾರತಮ್ಯವನ್ನು ವಿವರವಾಗಿ ತಿಳಿಯಲು ಸರ್ವಮೂಲ ಗ್ರಂಥಗಳು ಮುಖ್ಯ ಆಕರ. ನ್ಯಾಯಸುಧಾದಿ ಗ್ರಂಥಗಳಲ್ಲಿ, ಅವುಗಳ ಟಿಪ್ಪಣಿಗಳಲ್ಲಿ ವಿವರಗಳು ದೊರೆಯುತ್ತವೆ. ತಾರತಮ್ಯ ತತ್ತ್ವವನ್ನು ಕುರಿತು ಅನೇಕ ಕೃತಿಗಳು ಪದ್ಯ ಹಾಗೂ ಗದ್ಯ ರೂಪದಲ್ಲಿ ರಚಿತವಾಗಿವೆ. ಪ್ರಸಿದ್ಧವಾಗಿರುವ ಲಘುತಾರತಮ್ಯ ಸ್ತೋತ್ರವು ಅಡಕವಾಗಿ ತಾರತಮ್ಯದ ವಿವರಗಳನ್ನು ತಿಳಿಯಲು ಸಹಾಯಕವಾಗಿದೆ. ಹರಿದಾಸ ಸಾಹಿತ್ಯದಲ್ಲಿ ತಾರತಮ್ಯದ ಬಗ್ಗೆ ಅನೇಕ ವಿವರಗಳು ಸಂಕಲಿತವಾಗಿವೆ. ಹರಿಕಥಾಮೃತಸಾರದಲ್ಲಿ ಅನೇಕ ಸಂಧಿಗಳು ತಾರತಮ್ಯದ ನಿರೂಪಣೆಗೆ ಮೀಸಲಾಗಿವೆ.

**ಯಸ್ಯ ದೇವೇ ಪರಾಭಕ್ತಿರ್ಯಥಾ ದೇವೇ ತಥಾ ಗುರೌ ।**
**ತಸ್ಯೈತೇ ಕಥಿತಾ ಹ್ಯರ್ಥಾಃ ಪ್ರಕಾಶಂತೇ ಮಹಾತ್ಮನಃ ॥**[೧]

–ಎಂಬ ಶ್ವೇತಾಶ್ವತರೋಪನಿಷತ್ತಿನ ಮಾತಿನಲ್ಲಿ ಸರ್ವೋತ್ತಮತ್ವೇನ ಶ್ರೀಹರಿಯಲ್ಲಿನ ಭಕ್ತಿಯೊಂದಿಗೆ ತಾರತಮ್ಯ ಕ್ರಮದಲ್ಲಿ ದೇವತೆಗಳಲ್ಲಿ ಹಾಗೂ ಗುರುಗಳಲ್ಲಿ ಸಹ ಭಕ್ತಿಯು ಕರ್ತವ್ಯ ಎಂಬುದು ವಿಶೇಷ ರೀತಿಯಲ್ಲಿ ನಿರೂಪಿತವಾಗಿದೆ.

ದೇವತಾತಾರತಮ್ಯದಂತೆ ಗುರುತಾರತಮ್ಯವು ಅಗತ್ಯವಾದ ತತ್ತ್ವ ಎಂದು ಇದರಿಂದ ತಿಳಿಯುವುದು. ಗುರುಹಿರಿಯರಲ್ಲಿ ತಾರತಮ್ಯವನ್ನು ನಿರ್ಣಯಿಸಲು ಅಗತ್ಯವಾದ ಗುಣಗಳನ್ನು ಶ್ರೀಮದಾಚಾರ್ಯರು ಈ ರೀತಿಯಾಗಿ ತಿಳಿಸಿರುವರು:

**ವಿತ್ತಂ ಬಂಧುರ್ವಯಃ ಕರ್ಮ ವಿದ್ಯಾ ಚೈವ ತು ಪಂಚಮೀ ।**
**ಏತಾನಿ ಮಾನ್ಯಸ್ಥಾನಾನಿ ಗರೀಯೋ ಹ್ಯುತ್ತರೋತ್ತರಮ್ ॥**

ಸಂಪತ್ತು, ಬಂಧುತ್ವ, ವಯಸ್ಸು, ಸಾಧನೆ ಹಾಗೂ ವಿದ್ಯೆ ಇವುಗಳು ಆರೋಹಣ ಕ್ರಮದಲ್ಲಿ ಹಿರಿಮೆ, ಗರಿಮೆಗಳ ನಿರ್ಣಯಕ್ಕೆ ಸಾಧನಗಳು ಎಂದು ಭಾವ. ಇದರಲ್ಲಿ ಬಂಧುತ್ವವೂ ಸಹ ಸೇರಿರುವುದು ಗಮನಿಸಬೇಕಾದ ಅಂಶ. ಅದರಲ್ಲಿ ಗುರುಗಳು, ತಂದೆ, ತಾಯಿ, ಅಣ್ಣ ಅಕ್ಕ ಮೊದಲಾದ ಕ್ರಮದಲ್ಲಿ ಬಂಧುತ್ವದಲ್ಲಿ ತಾರತಮ್ಯವನ್ನು ತಿಳಿಯಬೇಕು. ಹಿರಿಯಣ್ಣನಂತೂ ತಂದೆಯ ಸಮಾನ; ಜ್ಯೇಷ್ಠಭ್ರಾತಾ ಪಿತೃಸಮಃ. ಗುರುಹಿರಿಯರಲ್ಲಿ ತಾರತಮ್ಯವನ್ನು ನಿರ್ಣಯಿಸಲು ಈ ಮಾನದಂಡ ಉಪಯುಕ್ತವೆನ್ನಿಸುವುದು.

ಅವರ ದೇಹಲಕ್ಷಣಗಳು ಸಹ ಅವರ ಸ್ವರೂಪಯೋಗ್ಯತೆಗೆ ಅನುಗುಣವಾಗಿರುವುದು ಮತ್ತೊಂದು ವಿಶೇಷಾಂಶ. ಲಕ್ಷ್ಮೀನಾರಾಯಣರದು ಸಮಸ್ತಲಕ್ಷಣೋಪೇತವಾದ, ಜ್ಞಾನಾನಂದಮಯವಾದ ಅಪ್ರಾಕೃತ

---

೧. 'ಹರಿಭಕ್ತಿಃ ಕ್ರಮೇಣೈವ ತದೀಯೇಷು ಹರಿಸ್ಮೃತಿಃ ।
ಹರಿಸ್ತುತಿಸ್ತತಸ್ತುತಿಶ್ಚ ತತ್ಸ್ತುತಿರ್ಹರಿಪೂಜನಮ್' ॥ ೨೪೯ ॥
ತತ್ಪೂಜಾ ವಿಹಿತಾತ್ಯಾಗ ಇತಿ ಮುಕ್ತೇಃ ಕ್ರಮೇಣ ಹಿ ।
ನಿಯಮಾತ್ ಸಾಧನಾನ್ಯೇವ ನಿತ್ಯಸಾಧ್ಯಾನಿ ಚಾಖಿಲೈಃ' ॥ ೨೫೦ ॥
ತಸ್ಮಾದ್ ವಂದ್ಯಾಶ್ಚ ಪೂಜ್ಯಾಶ್ಚ ಬ್ರಹ್ಮಾದ್ಯಾ ಜ್ಞಾನಯೋಜಕಾಃ ।
ಗುರುತ್ವೇನ ಕ್ರಮೇಣೈವ ವಿಶೇಷೇಣೈವ ಕೇಶವಃ ॥ ೧೦೪ ॥
'ಶರೀರಧಾತುಕತ್ವೇನ ಲಕ್ಷ್ಮ್ಯಾದ್ಯಾಶ್ಚ ಮುಮುಕ್ಷುಣಾ ।
ಧ್ಯೇಯಾಸ್ತದೀಶಿತೃತ್ವೇನ ಭಗವಾನ್ ಪುರುಷೋತ್ತಮಃ' ಇತಿ – ಈಶಾವಾಸ್ಯೋಪನಿಷತ್ತು

ಸ್ವರೂಪ. ಆ ಬಳಿಕ ಬ್ರಹ್ಮ-ವಾಯು ಮೊದಲಾದ ಪುರುಷ ಋಜುಗಳದು ನಂತರ ಸರಸ್ವತೀ-ಭಾರತೀ ಮೊದಲಾದ ಸ್ತ್ರೀಋಜುಗಳದು. ಇವರಲ್ಲಿಯೂ ಸಹ ಲಕ್ಷಣದ ಸ್ಫುಟತ್ವದಲ್ಲಿ ತಾರತಮ್ಯ ಇರುವುದು. ಆ ಬಳಿಕ ಗರುಡ-ಶೇಷ-ರುದ್ರಾದಿ ದೇವತೆಗಳು ಕ್ರಮವಾಗಿ ಲಕ್ಷಣದಲ್ಲಿ ಕಡಿಮೆ ಎನಿಸುವರು. ದುಷ್ಟರದು ದುರ್ಲಕ್ಷಣೋಪೇತವಾದ ಸ್ವರೂಪ. ಅವರಲ್ಲೂ ಸಕಲ ದುರ್ಲಕ್ಷಣೋಪೇತನಾದವನು ಎಂದರೆ, ಕಲಿ.

ಉಪಾಸನೆಯ ರೀತಿ, ಅದಕ್ಕನುಗುಣವಾಗಿ ಅವರಿಗೆ ಒದಗುವ ಭಗವದ್ದರ್ಶನದಲ್ಲೂ ಸಹ ತಾರತಮ್ಯ ಇದ್ದೇ ಇರುವುದು. ಪ್ರತಿಭೆಯಲ್ಲೂ ಇಂತಹ ತಾರತಮ್ಯ ಸದಾ ಇರುವುದು; ಅದರಂತೆ ಅವರ ಅಪರೋಕ್ಷಜ್ಞಾನದಲ್ಲೂ ಸಹ.

ದೇವತಾತಾರತಮ್ಯ, ಗುರುತಾರತಮ್ಯಗಳಂತೆ ನದೀತಾರತಮ್ಯವೂ ಸಹ ಪುರಾಣಗಳಲ್ಲಿ ಬಂದಿದೆ. ಶ್ರೀರಾಘವೇಂದ್ರಸ್ವಾಮಿಗಳ ನದೀತಾರತಮ್ಯ ಸ್ತೋತ್ರದಲ್ಲಿ ಅದರ ಸಂಗ್ರಹ ನಿರೂಪಣೆಯನ್ನು ಕಾಣಬಹುದು. ಅದರಲ್ಲಿ ತೀರ್ಥಗಳ ತಾರತಮ್ಯವೂ ಸಹ ನಿರೂಪಿತವಾಗಿರುವುದು ಗಮನಾರ್ಹ.

[೧]ವರ್ಣಕ್ರಮದಲ್ಲಿ ತಾರತಮ್ಯ ಮತ್ತೊಂದು ಬಗೆಯದು. ಬ್ರಾಹ್ಮಣರಲ್ಲಿ ಜ್ಞಾನವು ತಾರತಮ್ಯಕ್ಕೆ ನಿರ್ಣಾಯಕ: **ವಿಪ್ರಾಣಾಂ ಜ್ಞಾನತೋ ಜ್ಯೈಷ್ಠ್ಯಮ್**. ಕ್ಷತ್ರಿಯರಲ್ಲಿ ಬಲವೇ ತಾರತಮ್ಯಕ್ಕೆ ಗಮಕ: **ಯೋ ಯ ಏವ ಬಲಜ್ಯೇಷ್ಠಃ ಕ್ಷತ್ರಿಯೇಷು ಸ ಉತ್ತಮಃ**. ವೈಶ್ಯರಲ್ಲಿ ಸಂಪತ್ತಿಗೆ ಆ ಸ್ಥಾನ. ಕೇವಲ ವಯಸ್ಸು ಇತರರದು. ಅದರಂತೆ ಆಶ್ರಮಗಳಲ್ಲಿ ಯತಿಗಳಿಗೆ ಅಗ್ರ ಸ್ಥಾನ. ಅದರಲ್ಲೂ ಪರಮಹಂಸರಿಗೆ ಪರಮ ಪ್ರಾಶಸ್ತ್ಯ. ಜ್ಞಾನ, ಆಶ್ರಮಜ್ಯೇಷ್ಠತ್ವ ಇತ್ಯಾದಿ ಕ್ರಮದಲ್ಲಿ ಅವರಲ್ಲೂ ತಾರತಮ್ಯದ ನಿರ್ಣಯಕ್ಕೆ

---

೧. ಯೋ ಯ ಏವ ಬಲಜ್ಯೇಷ್ಠಃ ಕ್ಷತ್ರಿಯೇಷು ಸ ಉತ್ತಮಃ।
ಅಂಗಂ ಚೇದ್ವಿಷ್ಣುಕಾರ್ಯೇಷು ತದ್ಭಕ್ತ್ಯೈವ ನ ಚಾನ್ಯಥಾ॥
ಬಲಂ ನೈಸರ್ಗಿಕಂ ತಚ್ಚೇದ್ವರಾಸ್ತ್ರಾದೇಸ್ತದನ್ಯಥಾ।
ಅನ್ಯಾವೇಶನಿಮಿತ್ತಂ ಚೇದ್ಬಲಮನ್ಯಾತ್ಮಕಂ ಹಿ ತತ್॥
ದೇವೇಷು ಬಲಿನಾಮೇವ ಭಕ್ತಿಜ್ಞಾನೇ ನ ಚಾನ್ಯಥಾ।
ಸ ಏವ ಚ ಪ್ರಿಯೋ ವಿಷ್ಣೋರ್ನಾನ್ಯಥಾ ತು ಕಥಂಚನ॥
ತಸ್ಮಾದ್ಯೋ ಯೋ ಬಲಜ್ಯೇಷ್ಠಃ ಸ ಗುಣಜ್ಯೇಷ್ಠ ಏವ ಚ।
ಬಲಂ ಹಿ ಕ್ಷತ್ರಿಯೇ ವ್ಯಕ್ತಂ ಜ್ಞಾಯತೇ ಸ್ಥೂಲದೃಷ್ಟಿಭಿಃ॥
ಜ್ಞಾನಾದಯೋ ಗುಣಾ ಯಸ್ಮಾತ್ ಜ್ಞಾಯಂತೇ ಸೂಕ್ಷ್ಮದೃಷ್ಟಿಭಿಃ।
ತಸ್ಮಾದ್ಯತ್ರ ಬಲಂ ತತ್ರ ವಿಜ್ಞಾತವ್ಯಾ ಗುಣಾಃ ಪರೇ॥
ದೇವೇಷ್ವೇವ ನ ಚಾನ್ಯೇಷು ವಾಸುದೇವಪ್ರತೀಪತಃ।
ಕ್ಷತ್ರಾದನ್ಯೇಷ್ವಪಿ ಬಲಂ ಪ್ರಮಾಣಂ ಯತ್ರ ಕೇಶವಃ।
ಪ್ರವೃತ್ತೋ ದುಷ್ಟನಿಧನೇ ಜ್ಞಾನಕಾರ್ಯೇ ತದೈವ ಚ॥
ಅನ್ಯತ್ರ ಬ್ರಾಹ್ಮಣಾನಾಂ ತು ಪ್ರಮಾಣಂ ಜ್ಞಾನಮೇವ ಹಿ।
ಕ್ಷತ್ರಿಯಾಣಾಂ ಬಲಂ ಚೈವ ಸರ್ವೇಷಾಂ ವಿಷ್ಣುಕಾರ್ಯತಾ॥
ಕೃಷ್ಣರಾಮಾದಿರೂಪೇಷು ಬಲಕಾರ್ಯೋ ಜನಾರ್ದನಃ।
ದತ್ತವ್ಯಾಸಾದಿರೂಪೇಷು ಜ್ಞಾನಕಾರ್ಯಸ್ತಥಾ ಪ್ರಭುಃ॥ - ಮ.ಭಾ.ತಾ.ನಿ (೨/೧೭-೨೪)

ಅವಕಾಶವಿದೆ. ಪ್ರತಿಮೆಗಳಲ್ಲಿ ವ್ಯಕ್ತವಾಗಿರುವ ಸನ್ನಿಧಾನದಲ್ಲೂ ಸಹ ತಾರತಮ್ಯವು ಅವುಗಳ ಪ್ರತಿಷ್ಠಾಪಕರ, ಅರ್ಚಕರ ಯೋಗ್ಯತೆಯನ್ನು ಅವಲಂಬಿಸಿರುವುದು. ಪರ್ವಕಾಲ ಮೊದಲಾದವುಗಳ ಹಿನ್ನೆಲೆಯಲ್ಲಿ ಕಾಲದಲ್ಲೂ ಸಹ ತಾರತಮ್ಯದ ಚಿಂತನೆ ಇದೆ. ವೃಕ್ಷಗಳಲ್ಲಿ ತುಳಸಿಗೆ ಅಗ್ರಸ್ಥಾನ, ಹೀಗೆ ತಾರತಮ್ಯದ ಚಿಂತನೆ ಬಹುಮುಖವಾದುದು. ಭಗವದ್ಗೀತೆಯಲ್ಲಿ ಬಂದಿರುವ ವಿಭೂತಿರೂಪದ ವರ್ಣನೆಯಲ್ಲಿ ತಿಳಿಯುವಂತೆ, ಆಯಾ ಪದಾರ್ಥಗಳಲ್ಲಿನ ತಾರತಮ್ಯಕ್ಕೆ ಅದರಲ್ಲಿ ನೆಲೆಸಿರುವ ಭಗವಂತನ ವಿಭೂತಿರೂಪವು ಕಾರಣವೆನ್ನಿಸುವುದು.

ತಾರತಮ್ಯವು ಜ್ಞಾನ, ಭಕ್ತಿ, ಬಲ ಮೊದಲಾದ ಕೆಲವು ಗುಣಗಳನ್ನು ಮಾತ್ರ ಅವಲಂಬಿಸದೆ, ಸಕಲ ಗುಣಗಳಿಗೂ ಅವಲಂಬಿಸುವುದು ಎಂಬುದು ಮತ್ತೊಂದು ವಿಶೇಷಾಂಶ. ಎಂದರೆ, ಮೇಲಿನ ದೇವತೆಗಳಲ್ಲಿನ ಭಕ್ತಿ-ಜ್ಞಾನಾದಿ ಸಕಲ ಗುಣಗಳೂ ಸಹ ಅವರ ಕೆಳಗಿನ ದೇವತೆಗಳಲ್ಲಿ ಭಕ್ತಿ-ಜ್ಞಾನಾದಿ ಸಕಲಗುಣಗಳಿಗಿಂತಲೂ ನಿಯಮೇನ ಶ್ರೇಷ್ಠವಾಗಿರುವವು ಎಂದರ್ಥ. ಇದರಿಂದ ತಾರತಮ್ಯವು ಒಂದೆರಡು ಗುಣಗಳನ್ನು ಮಾತ್ರ ಅವಲಂಬಿಸಿದ ಲೋಕರೀತಿಯ ತಾರತಮ್ಯವಾಗಿರದೇ ಸಕಲ ಗುಣಗಳನ್ನೂ ಅವಲಂಬಿಸಿದ ವಿಶೇಷರೀತಿಯ ತಾರತಮ್ಯ ಎಂದರ್ಥ.

ಒಟ್ಟಾಗಿ ಈ ಎಲ್ಲ ಬಗೆಯ ತಾರತಮ್ಯಕ್ಕೂ ಮೂಲವಾದದ್ದು ಸ್ವರೂಪತಾರತಮ್ಯ; ಎಂದರೆ, ಸ್ವರೂಪದ ತಾರತಮ್ಯವೇ ಉಳಿದೆಲ್ಲ ತಾರತಮ್ಯಕ್ಕೂ ಸಹ ಮೂಲಕಾರಣ. ಉಳಿದೆಲ್ಲವೂ ಸಹ ಅದಕ್ಕೆ ಪೂರಕವಾಗಿ ಮಾತ್ರ ಇರುವುದು. ಹೀಗೆ ಸ್ವರೂಪಕ್ಕೆ ಅನ್ವಯಿಸುವುದರಿಂದಲೇ ತಾರತಮ್ಯವು ಅನಾದಿ ಹಾಗೂ ನಿತ್ಯ.

ಈ ಹಿನ್ನೆಲೆಯಲ್ಲಿ ತಾರತಮ್ಯತತ್ತ್ವವನ್ನು ಸರಿಯಾಗಿ ತಿಳಿದುಕೊಂಡು ಅನುಸಂಧಾನಕ್ಕೆ ತಂದುಕೊಂಡಲ್ಲಿ ಮಹಾಪ್ರಮೇಯವಾದ ಹರಿಸರ್ವೋತ್ತಮತ್ವವು ಹೆಚ್ಚು ಸ್ಫುಟವಾಗುವುದು. ಮುಖ್ಯವಾಗಿ ಮೋಕ್ಷಸಾಧನಕ್ಕೆ ಅಗತ್ಯವಾದ ಜ್ಞಾನವೆಂದರೆ ಅದೇ ಅಲ್ಲವೇ. ಆದ್ದರಿಂದ ತಾರತಮ್ಯದ ಪರಿಜ್ಞಾನ ಹಾಗೂ ತಾರತಮ್ಯವನ್ನು ನಿರೂಪಿಸುವ ಸ್ತೋತ್ರಕೃತಿಗಳ ಪಾರಾಯಣ, ಅನುಸಂಧಾನಾದಿಗಳು ಅತ್ಯಂತ ತಾರಕ[೧].

ಪ್ರಸ್ತುತ ಸೋತ್ರಮಾಲಿಕೆಯ ಒಂಭತ್ತನೇ ಭಾಗವು ಇಂತಹ ತಾರತಮ್ಯಸ್ತೋತ್ರಗಳ ಸಂಕಲನವಾಗಿದೆ ವೈದಿಕ ಸಾಹಿತ್ಯದಿಂದ ಹರಿದಾಸಸಾಹಿತ್ಯದವರೆಗಿನ ಆಕರಗ್ರಂಥಗಳಲ್ಲಿ ಬಂದಿರುವ ತಾರತಮ್ಯ ತತ್ತ್ವದ ಸಂಗ್ರಹ ಇದರಲ್ಲಿದೆ. ಉಪನಿಷದ್ಭಾಷ್ಯ ಮೊದಲಾದ ಸರ್ವಮೂಲಗ್ರಂಥಗಳಲ್ಲಿನ ತಾರತಮ್ಯ ನಿರೂಪಣೆ,

---

೧. ಮಾರನಯ್ಯನ ಕರುಣಪಾರಾವಾರಮುಖ್ಯಸುಪಾತ್ರರೆನಿಪ ಸ-
ರೋರುಹಾಸನ ವಾಣಿ ರುದ್ರೇಂದ್ರಾದಿ ಸುರನಿಕರ ।
ತಾರತಮ್ಯಾತ್ಮಕಸುಪದ್ಯಗಳಾರು ಪಠಿಸುವರಾ ಜನರಿಗೆ ರ-
ಮಾರಮಣ ಪೂರೈಸಲೀಪ್ಸಿತ ಸರ್ವಕಾಲದಲಿ ॥
ಮೂರುಕಾಲಂಗಳಲಿ ತುತಿಸೆ ಶರೀರವಾಙ್ಮನಶುದ್ಧಿ ಮಾಳ್ಪದು
ದೂರಗೈಸುವುದಖಿಳಪಾಪಸಮೂಹ ಪ್ರತಿದಿನದಿ ।
ಚೋರಭಯ ರಾಜಭಯ ನಕ್ರಚಮೂರುಶಸ್ತ್ರಜಲಾಗ್ನಿಭೂತಮ-
ಹೋರಗಜ್ವರನರಕಭಯ ಸಂಭವಿಸದೆಂದೆಂದು ॥ – ಹರಿಕಥಾಮೃತಸಾರ (೩೨/೫೪,೫೫)

ಶ್ರೀಜಯತೀರ್ಥರ ಕೃತಿಗಳಲ್ಲಿ ಬಂದಿರುವ ತಾರತಮ್ಯದ ವಿವೇಚನೆ, ಅನೇಕ ಯತಿವರೇಣ್ಯರು ರಚಿಸಿರುವ ತಾರತಮ್ಯಸ್ತೋತ್ರಗಳು, ಹಾಗೂ ವೈಷ್ಣವ ಪರಂಪರೆಯಲ್ಲಿ ಅನೇಕ ಮಹನೀಯರು ರಚಿಸಿರುವ ಅನೇಕ ತಾರತಮ್ಯಸ್ತೋತ್ರಗಳು ಇದರಲ್ಲಿ ಸಂಕಲಿತವಾಗಿವೆ. ಶ್ರೀನಾರಾಯಣಪಂಡಿತಾಚಾರ್ಯರ ಅಂಶಾವತಾರ ಹಾಗೂ ವ್ಯಾಸರಾಜರ ಪ್ರಶಿಷ್ಯರಾದ ವಿಠಲಾಚಾರ್ಯರ ತಾರತಮ್ಯಸದ್ರತ್ನಮಾಲಾ ಕೃತಿಗಳು, ಅಂಶ-ಆವೇಶಗಳ ವಿವರಗಳನ್ನು ನೀಡುವ ವಿಶಿಷ್ಟ ಕೃತಿಗಳು, ಅತ್ಯಂತ ಪ್ರಸಿದ್ಧವಿರುವ ಐದು ಶ್ಲೋಕಗಳ ತಾರತಮ್ಯಶ್ಲೋಕ ಪ್ರತ್ಯೇಕ ತಾರತಮ್ಯಸ್ತೋತ್ರಗಳಿಗೆ ನಾಂದಿ ಹಾಡಿದ ಕೃತಿ ಎನ್ನಬಹುದು. ಶ್ರೀವಾದಿರಾಜರು, ಶ್ರೀರಘೂತ್ತಮರು ಮೊದಲಾದ ಯತಿಶೇಖರರ ಕೃತಿಗಳೂ ಇದರಲ್ಲಿ ಸೇರಿವೆ. ಶ್ರೀಸತ್ಯಪರಾಕ್ರಮತೀರ್ಥರ ಪ್ರಮೇಯಮಾಲಾ ಗದ್ಯ ಕೃತಿಯಲ್ಲಿ ಬಂದಿರುವ ತಾರತಮ್ಯದ ನಿರೂಪಣೆ ತುಂಬಾ ಚೇತೋಹಾರಿಯಾದದ್ದು. ಇದರಲ್ಲಿ ಅನೇಕ ತಾರತಮ್ಯಶ್ಲೋಕಗಳು ಪ್ರಪ್ರಥಮ ಬಾರಿಗೆ ಪ್ರಸಾರವಾಗುತ್ತಿವೆ ಎಂಬುದು ವಿಶೇಷ. ಬೆಂಗಳೂರಿನ ಶ್ರೀಪೂರ್ಣಪ್ರಜ್ಞಸಂಶೋಧನ ಮಂದಿರದಿಂದ ಪ್ರಕಾಶಿತವಾದ ಕೃತಿಯಲ್ಲಿ ಅನೇಕ ಕೃತಿಗಳು ನಮ್ಮ ಶ್ರೀಜಯತೀರ್ಥ ಹಸ್ತಲಿಖಿತ ಗ್ರಂಥಾಲಯದಲ್ಲಿ ಉಪಲಬ್ಧವಿದ್ದ ಕೃತಿಗಳು. ಅದರೊಂದಿಗೆ ಇತ್ತೀಚೆಗೆ ದೊರೆತ ಇನ್ನೂ ಅನೇಕ ತಾರತಮ್ಯ ಸಂಬಂಧಿ ಕೃತಿಗಳನ್ನು ಇದರಲ್ಲಿ ಅಳವಡಿಸಲಾಗಿದೆ. ತಾರತಮ್ಯಪ್ರಬಂಧಮಾಲಾ ಸಂಪುಟದಲ್ಲಿ ಪ್ರಕಟವಾದ ಅನೇಕ ಕೃತಿಗಳ ಶುದ್ಧಪಾಠವನ್ನು ಇದರಲ್ಲಿ ನನ್ನ ಸಂಗ್ರಹದಲ್ಲಿನ ಪ್ರತಿಗಳನ್ನು ಆಧರಿಸಿ ನೀಡಲು ಸಾಧ್ಯವಾಗಿದೆ ಎಂಬುದು ವಿಶೇಷ

ಅಂಶಾವತಾರವು ಸುಮಧ್ವವಿಜಯ, ಲಯಚಂದ್ರಿಕಾದಿಗಳ ಕರ್ತೃವಾದ ಲಿಕುಚ ನಾರಾಯಣ-ಪಂಡಿತಾಚಾರ್ಯರ ಕೃತಿ[೧]. ಶ್ರೀವಾದಿರಾಜಶ್ರೀಚರಣರಂತೂ ಯುಕ್ತಿಮಲ್ಲಿಕಾಚಾರ್ಯರು ಎಂದೇ ಪ್ರಸಿದ್ಧರಾದ ಮಹಾಮಹಿಮರು. ಕಲ್ಯಾಣಿದೇವಿಯು ಶ್ರೀಮದಾಚಾರ್ಯರ ಸೋದರಿ ಎಂಬುದು ಒಂದು ಪಕ್ಷವಾದರೆ, ತ್ರಿವಿಕ್ರಮಪಂಡಿತರ ಸೋದರಿ ಎಂಬುದು ಮತ್ತೊಂದು. ಶ್ರೀರಘೂತ್ತಮತೀರ್ಥರು ಶ್ರೀಭಾವಬೋಧಕಾರರು ಎಂದು ಪ್ರಸಿದ್ಧರಾದ ಟಿಪ್ಪಣ್ಯಾಚಾರ್ಯರು. ಶ್ರೀಸತ್ಯವ್ರತತೀರ್ಥರು ಶ್ರೀರಘೂತ್ತಮತೀರ್ಥರ ಅನಂತರ ಅವರ ಪೀಠದಲ್ಲಿ ನಾಲ್ಕನೆಯವರಾಗಿ ವಿರಾಜಮಾನರಾದವರು[೨]. ಶ್ರೀನೃಸಿಂಹಭಿಕ್ಷುಗಳು ಶ್ರೀವಿದ್ಯಾಧೀಶತೀರ್ಥರ ಶಿಷ್ಯರಾದ ಯತಿಗಳು. ಶ್ರೀಸತ್ಯಪರಾಕ್ರಮತೀರ್ಥರು ಉತ್ತರಾದಿಮಠದ ಪೀಠದಲ್ಲಿ ಶ್ರೀಸತ್ಯಪರಾಯಣತೀರ್ಥರ ಶಿಷ್ಯರಾಗಿ ವಿರಾಜಮಾನರಾದವರು.

ಶ್ರೀವೇಣುಪಲ್ಲೀ ಶ್ರೀನಿವಾಸತೀರ್ಥರು ಗೃಹಸ್ಥ ಟಿಪ್ಪಣಿಕಾರರಲ್ಲಿ ಅಗ್ರಪಂಕ್ತಿಗೆ ಸೇರಿದವರು. ಶ್ರೀವೇಂಕಟಪತ್ಯಾಚಾರ್ಯರು ಅವರ ಪುತ್ರ. ಛಲಾರಿ ನರಸಿಂಹಾಚಾರ್ಯರು ಶ್ರೇಷ್ಠ ಟಿಪ್ಪಣಿಕಾರರು. ಋಗ್ಭಾಷ್ಯ ಟಿಪ್ಪಣಿ ಹಾಗೂ ಸ್ಮೃತ್ಯರ್ಥಸಾಗರ ಕೃತಿಗಳ ಮೂಲಕ ಪ್ರಸಿದ್ಧರಾದವರು. ತಾರತಮ್ಯಸದ್ರತ್ನಮಾಲಾ ಬರೆದ ಶ್ರೀವಿಠಲಾಚಾರ್ಯರು ಶ್ರೀವ್ಯಾಸರಾಜರ ಪ್ರಶಿಷ್ಯರು. ಗುರ್ಜಾಲ ಶ್ರೀವ್ಯಾಸಾಚಾರ್ಯರು ಅನಂತರದ ಅನೇಕ ತಾರತಮ್ಯಸ್ತೋತ್ರವ್ಯಾಖ್ಯಾನಗಳಲ್ಲಿ ಪ್ರಸ್ತಾಪಿತರಾದ

---

೧. ಈ ಬಗ್ಗೆ ಸಮಗ್ರಮಾಹಿತಿಯನ್ನು ನಮ್ಮ ಪ್ರಕಾಶನದ ಶ್ರೀವ್ಯಾಸಮಧ್ವ ಮಾಸಪತ್ರಿಕೆ (ಜನವರಿ ೨೦೧೫)ಯಲ್ಲಿ ಕೊಡಲಾಗಿದೆ.

೨. ಈ ಮುನ್ನ ಪ್ರಕಟಿತವಾಗಿರುವ ಇವರ ತಾರತಮ್ಯಕೃತಿಯಲ್ಲಿ ಅದರ ತತ್ತ್ವನಿರೂಪಕವಾದ ಪೂರ್ವಾರ್ಧ ಬಿಟ್ಟುಹೋಗಿತ್ತು. ಪ್ರಸ್ತುತ ಸಂಪುಟದಲ್ಲಿ ಅದನ್ನು ಸಮಗ್ರವಾಗಿ ಕೊಡಲಾಗಿದೆ.

ಮಹನೀಯರು. ಇತರ ಎಲ್ಲರೂ ತುಂಬಾ ಪ್ರಾಚೀನರೇ. ತಮ್ಮ ಅಧಿಕೃತ ರಚನೆಗಳಿಂದಾಗಿ ಮಾನ್ಯರಾದವರು. ತಾಮ್ರಪರ್ಣಿ ಶ್ರೀವಿಠಲಾಚಾರ್ಯರ ಪುತ್ರರಾದ ಶ್ರೀಆನಂದತೀರ್ಥಾಚಾರ್ಯರು (ಸತ್ತತ್ತ್ವರತ್ನಮಾಲಾ) ಬರೆದಿರುವ ತಾರತಮ್ಯ ಸ್ತೋತ್ರವು ಸಹ ತುಂಬಾ ಗಮನಾರ್ಹ; ಅವರ ಈ ಕೃತಿಗೆ ಅವರ ತಮ್ಮಂದಿರಾದ ಶ್ರೀಶ್ರೀನಿವಾಸಾಚಾರ್ಯರು ತುಂಬಾ ವಿಸ್ತಾರವಾದ ವ್ಯಾಖ್ಯಾನವನ್ನು ಬರೆದಿದ್ದು ಅದನ್ನು ಬರೆದಾಗ ಅವರಿಗೆ ಕೇವಲ ೧೮ ವರ್ಷಗಳಾಗಿದ್ದವು ಎಂಬುದು ಅಪೂರ್ವವೆನ್ನಿಸುವ ಸಂಗತಿ.

ತಾರತಮ್ಯತತ್ತ್ವದ ಸಮಗ್ರ ಗ್ರಹಿಕೆಗಾಗಿ ಹರಿದಾಸಸಾಹಿತ್ಯದಲ್ಲಿನ [೧] ಕೃತಿಗಳನ್ನೂ ಇದರಲ್ಲಿ ಸೇರಿಸಲಾಗಿದೆ. ಮುಖ್ಯವಾಗಿ ಶ್ರೀಜಗನ್ನಾಥದಾಸರ ಹರಿಕಥಾಮೃತಸಾರದಲ್ಲಿ ಸುಮಾರು ೧೦ ಸಂಧಿಗಳು ತಾರತಮ್ಯನಿರೂಪಣೆಗೆ ಮೀಸಲಾಗಿದ್ದು ಅವುಗಳನ್ನೆಲ್ಲ ಇದರ ಪರಿಶಿಷ್ಟದಲ್ಲಿ ಕೊಡಲಾಗಿದೆ. ತಾರತಮ್ಯಸ್ತೋತ್ರಗಳ ವ್ಯಾಖ್ಯಾನ ತುಂಬಾ ಗಮನಾರ್ಹವೆನ್ನಿಸುವಂತಹುದು.

ಪಂಚಶ್ಲೋಕೀ ತಾರತಮ್ಯಸ್ತೋತ್ರಕ್ಕೆ ಶ್ರೀಉಮರ್ಜಿ ಪ್ರಹ್ಲಾದ ಕೃಷ್ಣಾಚಾರ್ಯರು ರಚಿಸಿರುವ ವ್ಯಾಖ್ಯಾನ ತುಂಬಾ ಅಪೂರ್ವವೆನ್ನಿಸುವಂತಹುದು. ಅದರಂತೆ ಶ್ರೀನಿವಾಸತೀರ್ಥರ ನವಶ್ಲೋಕಿರತ್ನಮಾಲಾ ಕೃತಿಗೆ ಪ್ರದೀಪಿಕೆ ಎಂಬ ಬಿದರಹಳ್ಳಿ ಶ್ರೀವೆಂಕಟಪತ್ಯಾಚಾರ್ಯರ ವ್ಯಾಖ್ಯಾನವೂ ಅಪೂರ್ವವೇ ಆಗಿದೆ. ತುಂಬಾ ವಿಸ್ತಾರವಾದ ಅಂತಹ ವ್ಯಾಖ್ಯಾನ ಕೃತಿಗಳನ್ನು ಮುದ್ರಿಸಲು ಸಾಧ್ಯವಾಗಿಲ್ಲ. ಈ ಕೃತಿಯ ವ್ಯಾಪ್ತಿಗೆ ಅವು ಒಳಪಡುವುದಿಲ್ಲ ಎಂಬುದೇ ಅದಕ್ಕೆ ಮುಖ್ಯ ಕಾರಣ. ಆದರೂ ಕೃತಿಯ ಸಮಗ್ರತೆಗಾಗಿ ಅವುಗಳ ಆದ್ಯಂತ ಶ್ಲೋಕಗಳನ್ನು ಈ ಕೃತಿಯ ಪರಿಶಿಷ್ಟದಲ್ಲಿ ಕೊಡಲಾಗಿದೆ[೨].

ವಿಶೇಷವಾಗಿ ಶ್ರೀವಿಜಯದಾಸರ ಅನೇಕ ಸುಳಾದಿಗಳಲ್ಲಿ ತಾರತಮ್ಯ ಬಗೆಬಗೆಯಾಗಿ ನಿರೂಪಿತವಾಗಿದೆ; ಹರಿಕಥಾಮೃತಸಾರದ ಸಂಧಿಗಳಿಗೆ ಮುಖ್ಯಸ್ಫೂರ್ತಿ ಎನ್ನಿಸುವಂತೆ ಅವರ ಕೃತಿಗಳು ಇರುವುದು ಗಮನಿಸಬೇಕಾದ ಅಂಶ. ಶ್ರೀಕನಕದಾಸರ ಕೃತಿಗಳಲ್ಲೂ ತಾರತಮ್ಯದ ನಿರೂಪಣೆ ಸ್ಫುಟವಾಗಿಯೇ ಬಂದಿದೆ[೩].

---

೧. ಶ್ರೀಪುರಂದರದಾಸರು ಹಾಗೂ ಶ್ರೀವಿಜಯದಾಸರು ತಮ್ಮ ಅನೇಕ ಕೃತಿಗಳಲ್ಲಿ ತಾರತಮ್ಯದ ವಿವರಗಳನ್ನು ಬಗೆಬಗೆಯಾಗಿ ನೀಡಿರುವರು. ಗ್ರಂಥವಿಸ್ತಾರ ಭಯದಿಂದಾಗಿ ಅವುಗಳನ್ನು ಪ್ರಸ್ತುತ ಸಂಪುಟದಲ್ಲಿ ಅಳವಡಿಸಲಾಗಿಲ್ಲ. ನೂರು ಮುನಿಗಳು ಹಾಗೂ ನೂರು ರಾಜರುಗಳ ಹೆಸರನ್ನು ದಾಖಲಿಸಿದ ಹರಿದಾಸರು ಎಂಬುದು ಶ್ರೀವಿಜಯದಾಸರ ಹಿರಿಮೆ. ಈ ಸಂಪುಟದಲ್ಲಿ ಸೇರಿರುವ ಕನಕದಾಸರ ಕೃತಿಯಲ್ಲಿನ ಮೊದಲ ನುಡಿಯಲ್ಲಿ ಭಗವದ್ಭಕ್ತರಾದ ದೇವತೆಗಳ ವಿವರ ಮಧ್ವಸಿದ್ಧಾಂತದ ತಾರತಮ್ಯಕ್ಕೆ ಅನುಗುಣವಾಗಿಯೇ ಬಂದಿರುವುದು ಗಮನಾರ್ಹ. ಇದು ಅವರು ಮಾಧ್ವದೀಕ್ಷೆಯವರು ಎಂಬುದನ್ನು ಸ್ಫುಟಪಡಿಸುವ ಅಂಶ.

೨. ಇಲ್ಲಿ ಸಂಕಲಿತವಾಗಿರುವ ತಾರತಮ್ಯಸ್ತೋತ್ರಪ್ರತಿಪಾದಕವಾದ ಕೆಲವು ಕೃತಿಗಳಲ್ಲಿ ಅಲ್ಲಲ್ಲಿ ಸ್ವಲ್ಪ ಮಟ್ಟಿಗೆ ಭಿನ್ನಾಭಿಪ್ರಾಯ ಕಂಡುಬಂದಂತೆ ಕಾಣುವುದು. ಅದಕ್ಕೆ ಮುಖ್ಯವಾಗಿ ಲಿಪಿಕಾರರ ದೋಷ ಕಾರಣ. ಅಲ್ಲದೆ, ಅಂತಹ ಭಿನ್ನಾಭಿಪ್ರಾಯ ಮುಖ್ಯ ತಾರತಮ್ಯಕ್ಕೆ ವಿರೋಧಿಯಾದುದೇನಲ್ಲ ಎಂಬುದನ್ನು ಗಮನಿಸಬೇಕು.

೩. ಬಲ್ಲವರೆ ಬಲ್ಲರು ಎಲ್ಲವರರಿಯರು
ಫುಲ್ಲಲೋಚನ ಪರಬ್ರಹ್ಮನೆಂಬುದನು ॥ ಪ ॥

ಒಟ್ಟಾಗಿ ತಾರತಮ್ಯತತ್ತ್ವದ ಸಮಗ್ರ ಪರಿಜ್ಞಾನಕ್ಕೆ ಈ ಸಂಪುಟದಿಂದಾಗುವ ಪ್ರಯೋಜನ ಅಪಾರವಾದುದು ಎಂಬ ವಿಶ್ವಾಸ ನನಗಿದೆ.

ಪ್ರಸ್ತುತ ತಾರತಮ್ಯಸ್ತೋತ್ರಮಾಲಿಕಾ ಕೃತಿಯು ಅನೇಕ ಪ್ರಾಚೀನ ಮುದ್ರಿತ ಕೃತಿಗಳನ್ನು ಹಾಗೂ ಮುಖ್ಯವಾಗಿ ನಮ್ಮ ಶ್ರೀಜಯತೀರ್ಥಹಸ್ತಲಿಖಿತ ಗ್ರಂಥಾಲಯ, ವ್ಯಾಸನಕೆರೆಯಲ್ಲಿ ಉಪಲಬ್ಧವಿರುವ ಹಸ್ತಪ್ರತಿಗಳನ್ನು ಆಧರಿಸಿವೆ. ಶ್ರೀಪೂರ್ಣಪ್ರಜ್ಞಸಂಶೋಧನ ಮಂದಿರದಿಂದ ಪ್ರಕಾಶಿತವಾದ ತಾರತಮ್ಯಪ್ರಬಂಧ ಕೃತಿಯಲ್ಲಿಯ ಕೆಲವು ಕೃತಿಗಳನ್ನೂ ಇದರಲ್ಲಿ ಅಳವಡಿಸಲಾಗಿದೆ. ನನ್ನ ಸಂಗ್ರಹದಲ್ಲಿ ದೊರೆತ ಹಸ್ತಪ್ರತಿಗಳ ಆಧಾರದಿಂದ ಅವುಗಳಲ್ಲಿ ಅನೇಕ ಕೃತಿಗಳಿಗೆ ಹೆಚ್ಚು ಶುದ್ಧ ಪಾಠವನ್ನು ಕೊಡಲು ಸಾಧ್ಯವಾಗಿದೆ.

ಪ್ರಸ್ತುತ ತಾರತಮ್ಯಸ್ತೋತ್ರಮಾಲಿಕಾ ಕೃತಿಯನ್ನು ಪ್ರಾಯೋಜಿಸಿರುವವರು **ಒಬ್ಬ ಅಂತರಂಗ ಭಕ್ತರು.** ನಮ್ಮ ಪ್ರತಿಷ್ಠಾನಕ್ಕೆ ಅವರ ಸೇವೆ ಬಹುಮುಖವಾದುದು. ಅವರಿಗೆ ನಮ್ಮ ಪ್ರತಿಷ್ಠಾನ ಋಣಿ. ಡಿ.ಟಿ.ಪಿ ಕಾರ್ಯ ರಯಿಪ್ರಾಣ ಇಂಪ್ರೆಷನ್ಸ್‌ನ ಚಿ॥ ಮಾರುತಿರಾವ್ ಅವರದು; ಸಹಕಾರ ಚಿ ॥ ಆರ್. ಆನಂದಪದ್ಮನಾಭ(ಸುದರ್ಶನ), ನನ್ನ ಪುತ್ರ ಡಾ. ಜಯಂತ ಪಿ. ವ್ಯಾಸನಕೆರೆ ಹಾಗೂ ಚಿ॥ ಪ್ರವೀಣ ಕಟ್ಟಿ ಅವರದು. ವಿಶೇಷ ಸಹಕಾರ ನನ್ನ ಧರ್ಮಪತ್ನೀ ಚಿ. ಸೌ ಜಯಶ್ರೀ ಪಿ. ವ್ಯಾಸನಕೆರೆ ಹಾಗೂ ಸೊಸೆ ಚಿ. ಸೌ. ಶ್ರುತಿ ವ್ಯಾಸನಕೆರೆ ಇವರದು; ಮುದ್ರಣ ವಾಗರ್ಥ ಅವರದು; ಇವರೆಲ್ಲರಿಗೂ ನಮ್ಮ ಪ್ರತಿಷ್ಠಾನವು ಋಣಿ.

**ಬೆಂಗಳೂರು -** **ವ್ಯಾಸನಕೆರೆ ಪ್ರಭಂಜನಾಚಾರ್ಯ**

**ದುರ್ಮುಖ - ವೈಕುಂಠ ಏಕಾದಶೀ (೦೯.೦೧.೨೦೧೭)**

---

ಅಜನು ಅಧಿಕ ಬಲ್ಲ ಅನಲ ಸ್ನೇಹಿತ ಬಲ್ಲ
ಗಜಚರ್ಮಾಂಬರ ಬಲ್ಲ ಗರುಡ ಬಲ್ಲ
ಭುಜಗೇಶ್ವರನು ಬಲ್ಲ ಭೂರಿಲೋಚನ ಬಲ್ಲ
ತ್ರಿಜಗಾಧಿಪತಿ ತ್ರಿವಿಕ್ರಮನೆಂಬುದನು ॥ ೧ ॥

|| श्रीः ||

# ಸ್ತೋತ್ರಮಾಲಿಕಾ - ೯
# (ತಾರತಮ್ಯಸ್ತೋತ್ರಮಾಲಿಕಾ)

॥ ಶ್ರೀ ಗುರುಭ್ಯೋ ನಮಃ ॥ ಹರಿಃ ಓಮ್ ॥

॥ ಶ್ರೀಮದ್ಧನುಮದ್ಭೀಮಮಧ್ವಾಂತರ್ಗತ ಶ್ರೀರಾಮಕೃಷ್ಣವೇದವ್ಯಾಸಾತ್ಮಕ ಶ್ರೀಲಕ್ಷ್ಮೀಹಯಗ್ರೀವಾಯ ನಮಃ ॥

## ೧. ಉಪನಿಷತ್ತುಗಳಲ್ಲಿ ತಾರತಮ್ಯ

---

### ೧. ಆನಂದತಾರತಮ್ಯಮೀಮಾಂಸಾ (ತೈತ್ತಿರೀಯೋಪನಿಷತ್)

ಸೈಷಾಽಽನಂದಸ್ಯ ಮೀಮಾಂಸಾ ಭವತಿ। ಯುವಾ ಸ್ಯಾತ್ಸಾಧು ಯುವಾಽಧ್ಯಾಯಕಃ। ಆಶಿಷ್ಠೋ ದೃಢಿಷ್ಠೋ ಬಲಿಷ್ಠಃ। ತಸ್ಯೇಯಂ ಪೃಥಿವೀ ಸರ್ವಾ ವಿತ್ತಸ್ಯ ಪೂರ್ಣಾ ಸ್ಯಾತ್। ಸ ಏಕೋ ಮಾನುಷ ಆನಂದಃ। ತೇ ಯೇಶತಂ ಮಾನುಷಾ ಆನಂದಾಃ। ಸ ಏಕೋ ಮನುಷ್ಯಗಂಧರ್ವಾಣಾಮಾನಂದಃ। ಶ್ರೋತ್ರಿಯಸ್ಯ ಚಾಕಾಮಹತಸ್ಯ ॥ ೧೭ ॥

ತೇ ಯೇ ಶತಂ ಮನುಷ್ಯಗಂಧರ್ವಾಣಾಮಾನಂದಾಃ। ಸ ಏಕೋ ದೇವಗಂಧರ್ವಾಣಾಮಾನಂದಃ। ಶ್ರೋತ್ರಿಯಸ್ಯ ಚಾಕಾಮಹತಸ್ಯ। ತೇ ಯೇ ಶತಂ ದೇವಗಂಧರ್ವಾಣಾಮಾನಂದಾಃ। ಸ ಏಕಃ ಪಿತೄಣಾಂ ಚಿರಲೋಕಲೋಕಾನಾಮಾನಂದಃ। ಶ್ರೋತ್ರಿಯಸ್ಯ ಚಾಕಾಮಹತಸ್ಯ। ತೇ ಯೇ ಶತಂ ಪಿತೄಣಾಂ ಚಿರಲೋಕಲೋಕಾನಾಮಾನಂದಾಃ। ಸ ಏಕ ಆಜಾನಜಾನಾಂ ದೇವಾನಾಮಾನಂದಃ। ಶ್ರೋತ್ರಿಯಸ್ಯ ಚಾಕಾಮಹತಸ್ಯ। ತೇ ಯೇ ಶತಮಾಜಾನಜಾನಾಂ ದೇವಾನಾಮಾನಂದಾಃ। ಸ ಏಕಃ ಕರ್ಮದೇವಾನಾಂ ದೇವಾನಾಮಾನಂದಃ ॥ ೧೮ ॥ ಯೇ ಕರ್ಮಣಾ ದೇವಾನಪಿಯಂತಿ। ಶ್ರೋತ್ರಿಯಸ್ಯ ಚಾಕಾಮಹತಸ್ಯ। ತೇ ಯೇ ಶತಂ ಕರ್ಮದೇವಾನಾಂ ದೇವಾನಾಮಾನಂದಾಃ। ಸ ಏಕೋ ದೇವಾನಾಮಾನಂದಃ। ಶ್ರೋತ್ರಿಯಸ್ಯ ಚಾಕಾಮಹತಸ್ಯ। ತೇ ಯೇ ಶತಂ ದೇವಾನಾಮಾನಂದಾಃ। ಸ ಏಕ ಇಂದ್ರಸ್ಯಾನಂದಃ। ಶ್ರೋತ್ರಿಯಸ್ಯ ಚಾಕಾಮಹತಸ್ಯ। ತೇ ಯೇ ಶತಮಿಂದ್ರಸ್ಯಾನಂದಾಃ। ಸ ಏಕೋ ಬೃಹಸ್ಪತೇರಾನಂದಃ। ಶ್ರೋತ್ರಿಯಸ್ಯ ಚಾಕಾಮಹತಸ್ಯ। ತೇ ಯೇ ಶತಂ ಬೃಹಸ್ಪತೇರಾನಂದಾಃ ॥ ೧೯ ॥ ಸ ಏಕಃ ಪ್ರಜಾಪತೇರಾನಂದಃ। ಶ್ರೋತ್ರಿಯಸ್ಯ ಚಾಕಾಮಹತಸ್ಯ। ತೇ ಯೇ ಶತಂ ಪ್ರಜಾಪತೇರಾನಂದಾಃ। ಸ ಏಕೋ ಬ್ರಹ್ಮಣಆನಂದಃ। ಶ್ರೋತ್ರಿಯಸ್ಯ ಚಾಕಾಮಹತಸ್ಯ ॥೨೦॥

॥ ಇತಿ ಶ್ರೀತೈತ್ತಿರೀಯೋಪನಿಷದಿ ಆನಂದತಾರತಮ್ಯಮೀಮಾಂಸಾ ॥

*****

## ೨. ಆನಂದತಾರತಮ್ಯಮೀಮಾಂಸಾ (ಬೃಹದಾರಣ್ಯಕೋಪನಿಷತ್)

ಸ ಯೋ ಹ ವೈ ಮನುಷ್ಯಾಣಾಂ ರಾದ್ಧಃ ಸಮೃದ್ಧೋ ಭವತ್ಯನ್ಯೇಷಾಮಧಿ ಪತಿಸ್ಸರ್ವೈರ್ಮಾನುಷ್ಯಕೈರ್ಭೋಗೈಃ ಸಂಪನ್ನತಮಃ ಸ ಮನುಷ್ಯಾಣಾಂ ಪರಮ ಆನಂದೋಽಥ ಯೇ ಶತಂ ಮನುಷ್ಯಾಣಾಮಾನಂದಾಃ ಸ ಏಕಃ ಪಿತೃಣಾಂ ಜಿತಲೋಕಾನಾಮಾನಂದೋಽಥ ಯೇ ಶತಂ ಪಿತೃಣಾಂ ಜಿತಲೋಕಾನಾಮಾನಂದಾಃ ಸ ಏಕೋ ಗಂಧರ್ವಲೋಕ ಆನಂದೋಽಥ ಯೇ ಶತಂ ಗಂಧರ್ವಲೋಕ ಆನಂದಾಃ ಸ ಏಕಃ ಕರ್ಮದೇವಾನಾಮಾನಂದೋ ಯೇ ಕರ್ಮಣಾ ದೇವತ್ವಮಭಿಸಂಪದ್ಯಂತೇಽಥ ಯೇ ಶತಂ ಕರ್ಮದೇವಾನಾಮಾನಂದಾಃ ಸ ಏಕ ಆಜಾನದೇವಾನಾಮಾನಂದೋ ಯಶ್ಚ ಶ್ರೋತ್ರಿಯೋಽವೃಜಿನೋಽಕಾಮ ಹತೋಽಥ ಯೇ ಶತಮಾಜಾನದೇವಾನಾಮಾನಂದಾಃ ಸ ಏಕಃ ಪ್ರಜಾಪತಿಲೋಕ ಆನಂದೋ ಯಶ್ಚ ಶ್ರೋತ್ರಿಯೋಽವೃಜಿನೋಽಕಾಮಹತೋಽಥ ಯೇ ಶತಂ ಪ್ರಜಾಪತಿಲೋಕ ಆನಂದಾಃ ಸ ಏಕೋ ಬ್ರಹ್ಮಲೋಕ ಆನಂದೋ ಯಶ್ಚ ಶ್ರೋತ್ರಿ ಯೋಽವೃಜಿನೋಽಕಾಮಹತೋಽಥೈಷ ಏವ ಪರಮ ಆನಂದ ಏಷ ಬ್ರಹ್ಮಲೋಕಃ ಸಮ್ರಾಡಿತಿ ಹೋವಾಚ ಯಾಜ್ಞವಲ್ಕ್ಯಃ ಸೋಽಹಂ ಭಗವತೇ ಸಹಸ್ರಂ ದದಾಮ್ಯತ ಊರ್ಧ್ವಂ ವಿಮೋಕ್ಷಾಯೈವ ಬ್ರೂಹೀತ್ಯತ್ರ ಹ ಯಾಜ್ಞವಲ್ಕ್ಯೋ ಬಿಭಯಾಂಚಕಾರ ಮೇಧಾವೀ ರಾಜಾ ಸರ್ವೇಭ್ಯೋ ಮಾಽಂತೇಭ್ಯ ಉದರೌತ್ಸೀದಿತಿ ॥ ೩೩ ॥

ಸ ವಾ ಏಷ ಏತಸ್ಮಿನ್ಸ್ವಪ್ನಾಂತೇ ರತ್ವಾ ಚರಿತ್ವಾ ದೃಷ್ಟ್ವೈವ ಪುಣ್ಯಂ ಚ ಪಾಪಂ ಚ ಪುನಃ ಪ್ರತಿನ್ಯಾಯಂ ಪ್ರತಿಯೋನ್ಯಾದ್ರವತಿ ಬುದ್ಧಾಂತಾಯೈವ ॥ ೩೪ ॥ ತದ್ಯಥಾಽನನಃ ಸುಸಮಾಹಿತಮುತ್ಸರ್ಜದ್ಯಾಯಾದೇವಮೇವಾಯಂ ಶರೀರ ಆತ್ಮಾ ಪ್ರಾಜ್ಞೇನಾತ್ಮನಾಽನ್ವಾರೂಢಂ ಉತ್ಸರ್ಜದ್ಯಾತಿ ಯತ್ರೈತದೂರ್ಧ್ವೋಚ್ಛ್ವಾಸೀ ಭವತಿ ॥ ೩೫ ॥ ಸ ಯತ್ರಾಯಮಣಿಮಾನಂ ನ್ಯೇತಿ ಜರಯಾ ವೋಪತಪತಾ ವಾಽಣಿಮಾನಂ ನಿಗಚ್ಛತಿ ತದ್ಯಥಾಮ್ರಮೌದುಂಬರಂ ವಾ ಪಿಪ್ಪಲಂ ವಾ ಬಂಧನಾತ್ಪ್ರಮುಚ್ಯತ ಏವಮೇವಾಯಂ ಪುರುಷ ಏಭ್ಯೋಽಂಗೇಭ್ಯಃ ಸಂಪ್ರಮುಚ್ಯ ಪುನಃ ಪ್ರತಿನ್ಯಾಯಂ ಪ್ರತಿಯೋನ್ಯಾದ್ರವತಿ ಪ್ರಾಣಾಯೈವ ॥ ೩೬ ॥ ತದ್ಯಥಾ ರಾಜಾನಮಾಯಾಂತಮುಗ್ರಾಃ ಪ್ರತ್ಯೇನಸಃ ಸೂತಗ್ರಾಮಣ್ಯೋಽನ್ನೈಃ ಪಾನೈರಾವಸಥೈಃ ಪ್ರತಿಕಲ್ಪಂತೇಽಯ-ಮಾಯಾತ್ಯಯಮಾಗಚ್ಛತೀತ್ಯೇವಂ ಹೈವಂವಿದಂ ಸರ್ವಾಣಿ ಭೂತಾನಿ ಪ್ರತಿಕಲ್ಪಯಂತ ಇದಂ ಬ್ರಹ್ಮಾಯಾತೀದಮಾಗಚ್ಛತೀತಿ ॥ ೩೭ ॥ ತದ್ಯಥಾ ರಾಜಾನಂ ಪ್ರಯಿಯಾಸಂತಮುಗ್ರಾಃ ಪ್ರತ್ಯೇನಸಃ ಸೂತಗ್ರಾಮಣ್ಯೋಽಭಿಸಮಾಯಂತ್ಯೇ-

ವಮೇವೇಮಮಾತ್ಮಾನಮಂತಕಾಲೇ ಸರ್ವೇ ಪ್ರಾಣಾ ಅಭಿಸಮಾಯಂತಿ ಯತ್ರೈತದೂರ್ಧ್ವೋಚ್ಛ್ವಾಸೀ ಭವತಿ ॥ ೩೮ ॥

॥ ಇತಿ ಶ್ರೀಬೃಹದಾರಣ್ಯಕೋಪನಿಷದೀ ಆನಂದತಾರತಮ್ಯನಿರೂಪಣಮ್ ॥

*****

## ೩. ದೇವತಾತಾರತಮ್ಯಮ್ (ಐತರೇಯೋಪನಿಷತ್)

ಸ ಈಕ್ಷತೇಮೇ ನು ಲೋಕಾಶ್ಚ ಲೋಕಪಾಲಾಶ್ಚಾನ್ನಮೇಭ್ಯಃ ಸೃಜಾ ಇತಿ ಸೋಽ-ಪೋಽಭ್ಯತಪತ್ತಾಭ್ಯೋಽಭಿತಪ್ತಾಭ್ಯೋ ಮೂರ್ತಿರಜಾಯತ ಯಾ ವೈ ಸಾ ಮೂರ್ತಿರಜಾಯತಾನ್ನಂ ವೈ ತತ್ತದೇತತ್ಸೃಷ್ಟಂ ಪರಾಙ್ತ್ಯಜಿಘಾಂಸತ್ತದ್ವಾಚಾಽಜಿ-ಘೃಕ್ಷತ್ತನನಾಶಕ್ನೋದ್ವಾಚಾ ಗ್ರಹೀತುಂ ಸ ಯದ್ಧೈನದ್ವಾಚಾಽಗ್ರಹೈಷ್ಯದಭಿವ್ಯಾಹೃತ್ಯ ಹೈವಾನ್ನಮತ್ರಪ್ಸ್ಯತ್ತತ್ಪ್ರಾಣೇನಾಜಿಘೃಕ್ಷತ್ತನ್ನಾಶಕ್ನೋತ್ಪ್ರಾಣೇನ ಗ್ರಹೀತುಂ ಸ ಯದ್ಧೈ-ನತ್ಪ್ರಾಣೇನಾಗ್ರಹೈಷ್ಯದಭಿಪ್ರಾಣ್ಯ ಹೈವಾನ್ನಮತ್ರಪ್ಸ್ಯತ್ತಚ್ಚಕ್ಷುಷಾಽಜಿಘೃಕ್ಷತ್ತನ್ನಾ-ಶಕ್ನೋಚ್ಚಕ್ಷುಷಾ ಗ್ರಹೀತುಂ ಸ ಯದ್ಧೈನಚ್ಚಕ್ಷುಷಾಽಗ್ರಹೈಷ್ಯದ್ದೃಷ್ಟ್ವಾ ಹೈವಾ-ನ್ನಮತ್ರಪ್ಸ್ಯತ್ತಚ್ಛ್ರೋತ್ರೇಣಾಜಿಘೃಕ್ಷತ್ತನ್ನಾಶಕ್ನೋಚ್ಛ್ರೋತ್ರೇಣ ಗ್ರಹೀತುಂ ಸ ಯದ್ಧೈನ-ಚ್ಛ್ರೋತ್ರೇಣಾಗ್ರಹೈಷ್ಯತ್ ಶ್ರುತ್ವಾ ಹೈವಾನ್ನಮತ್ರಪ್ಸ್ಯತ್ತತ್ತ್ವಚಾಽಜಿಘೃಕ್ಷತ್ತನ್ನಾಶಕ್ನೋ-ತ್ತ್ವಚಾ ಗ್ರಹೀತುಂ ಸ ಯದ್ಧೈನತ್ತ್ವಚಾಽಗ್ರಹೈಷ್ಯತ್ಸ್ಪೃಷ್ಟ್ವಾ ಹೈವಾನ್ನಮತ್ರಪ್ಸ್ಯತ್ತನ್ಮನ-ಸಾಽಜಿಘೃಕ್ಷತ್ತನ್ನಾಶಕ್ನೋನ್ಮನಸಾ ಗೃಹೀತುಂ ಸ ಯದ್ಧೈತನ್ಮನಸಾಗ್ರಹೈಷ್ಯದ್ಧ್ಯಾತ್ವಾ ಹೈವಾನ್ನಮತ್ರಪ್ಸ್ಯತ್ತಚ್ಛಿಶ್ನೇನಾಜಿಘೃಕ್ಷತ್ತನ್ನಾಶಕ್ನೋಚ್ಛಿಶ್ನೇನ ಗ್ರಹೀತುಂ ಸ ಯದ್ಧೈನ-ಚ್ಛಿಶ್ನೇನಾಗ್ರಹೈಷ್ಯದ್ವಿಸೃಜ್ಯ ಹೈವಾನ್ನಮತ್ರಪ್ಸ್ಯತ್ತದಪಾನೇನಾಜಿಘೃಕ್ಷತ್ತದಾವಯತ್ಸೈ-ಷೋಽನ್ನಸ್ಯ ಗ್ರಹೋ ಯದ್ವಾಯುರನ್ನಾಯುರ್ವಾ ಏಷ ಯದ್ವಾಯುಃ ಸ ಈಕ್ಷತ ಕಥಂ ನ್ವಿದಂ ಮದೃತೇ ಸ್ಯಾದಿತಿ ಸ ಈಕ್ಷತ ಕತರೇಣ ಪ್ರಪದ್ಯಾ ಇತಿ ಸ ಈಕ್ಷತ ಯದಿ ವಾಚಾಽಭಿವ್ಯಾಹೃತಂ ಯದಿ ಪ್ರಾಣೇನಾಭಿಪ್ರಾಣಿತಂ ಯದಿ ಚಕ್ಷುಷಾ ದೃಷ್ಟಂ ಯದಿ ಶ್ರೋತ್ರೇಣ ಶ್ರುತಂ ಯದಿ ತ್ವಚಾ ಸ್ಪೃಷ್ಟಂ ಯದಿ ಮನಸಾ ಧ್ಯಾತಂ ಯದ್ಯಪಾನೇನಾಭ್ಯಪಾನಿತಂ ಯದಿ ಶಿಶ್ನೇನ ವಿಸೃಷ್ಟಮಥ ಕೋಽಹಮಿತಿ ಸ ಏತಮೇವ ಸೀಮಾನಂ ವಿದಾರ್ಯೈತಯಾ ದ್ವಾರಾ ಪ್ರಾಪದ್ಯತ ಸೈಷಾ ವಿದೃತಿರ್ನಾಮ ದ್ವಾಸ್ತದೇತನ್ನಾಂದನಂ ತಸ್ಯ ತ್ರಯ ಆವಸಥಾಸ್ತ್ರಯಃ ಸ್ವಪ್ನಾ ಅಯಮಾವಸಥೋಽ-ಯಮಾವಸಥೋಽಯಮಾವಸಥ ಇತಿ ಸ ಜಾತೋ ಭೂತಾನ್ಯಭಿವ್ಯೈಖ್ಯತ್ಕಿಮಿಹಾನ್ಯಂ ವಾವದಿಷದಿತಿ ಸ ಏತಮೇವ ಪುರುಷಂ ಬ್ರಹ್ಮತತಮಮಪಶ್ಯದಿದಮದರ್ಶಮಿತೀ ೩ ತಸ್ಮಾದಿದಂದ್ರೋ ನಾಮೇದಂದ್ರೋ ಹ ವೈ ನಾಮ ತಮಿದಂದ್ರಂ ಸಂತಮಿಂದ್ರ

ಪಾಥೋಽಂತಃಪರಿಚಾರಿಣೋ ಮೃಗಪಶುಶ್ವಾಶ್ವಾ ಗಜಾಶ್ಚಾಂತ್ಯಜಾಃ
ಶೂದ್ರಾ ವೈಶ್ಯಜನಾ ಯುಗೋತ್ತರಗುಣಾಃ ಕುರ್ವಂತು ಮೇ ಮಂಗಲಮ್ ॥ ೧ ॥

ಕ್ಷತ್ರೋ ಮರ್ತ್ಯವರಾತ್ಮದಿವ್ಯವನಿತಾಸ್ತಾಸಾಂ ಸುನಾಥಾಶ್ಚ ತೇ
ಚಾತುರ್ವಿಧ್ಯಯುಜೋ ಗೃಹೇ ಗುಣಗಣಾಪೂರ್ಣೇ ವನೇಚಾರಿಣಃ ।
ಪಾರಿವ್ರಾಜ್ಯಯುಜೋಽಖಿಲಕ್ಷಿತಿಪತಿಸ್ವರ್ಣಾಂಗನಾಸ್ತದ್ರತಾಃ
ಪುಂಗಂಧರ್ವಕಲತ್ರತದ್ರತಿಯುತಾಃ ಕುರ್ವಂತು ಮೇ ಮಂಗಲಮ್ ॥ ೨ ॥

ಗಂಧರ್ವಾ ದಿತಿಜಾತಗೇಯವನಿತಾಸ್ತದ್ಭೋಗಭಾಗ್ಯೋಽನ್ವತಾಃ
ಸ್ವೈರಸ್ವರ್ಚ್ಛಕಲತ್ರತದ್ರತಿಯುತಾಃ ಋಷ್ಯಂಗನಾಃ ಕೂಪಕಾಃ ।
ವಾಪ್ಯೋಽಥೋ ಋಷಯಸ್ತಟಾಕಸರಿತೋ ದೇವಪ್ರಖಾತೋಲ್ಲಸ-
ನ್ಮಾನ್ಯಾಜಾನಜದೇವತಾರಮಣದಾಃ ಕುರ್ವಂತು ಮೇ ಮಂಗಲಮ್ ॥ ೩ ॥

ಸ್ವಾಮ್ಯಾದ್ಯನ್ಯಸುಪುಷ್ಕರಾಕರಗಣಾಃ ಗೋಪ್ಯಃ ಪಿನಾಕ್ಯಾದಿಜಾಃ
ಪೂಜ್ಯಾಜಾನಜದೇವತಾಃ ಸುಕುಮುದಾಧಾರಾ ನೃಸಿಂಹೋದ್ಭವಾಃ ।
ಸಿಂಧುರ್ಮಾನ್ಯನದೀವರಾ ಸುಸರಯೂ ಮಾನ್ಯಾ ಕವೇರಾತ್ಮಜಾ
ಕಾಲಿಂದೀ ತ್ರಿಸುಪುಷ್ಕರಾಕರಕೃಣಾಃ ಕುರ್ವಂತು ಮೇ ಮಂಗಲಮ್ ॥ ೪ ॥

ನಂದಾನೀ ವರದೇವಕೀ ಹರಿಪಿತಾ ಕರ್ಮಾತ್ಮಕಃ ಪುಷ್ಕರಃ
ಹಾರಾದಿಃ ಶನಿಸೌಮ್ಯದಿವ್ಯವನಿತಾಃ ನಾಸತ್ಯಭಾರ್ಯೋಷಸಃ ।
ಗೋದಾ ಚಂದ್ರಸುತೋಽಗ್ನಿದಿವ್ಯವನಿತಾ ಕೂರ್ಮಾದಯಃ ಶ್ರೀಹರೇಃ
ಪಾದೋತ್ಥಾ ಕೃತಿಜಾಃ ಸುರಾಃ ಪ್ರತಿದಿನಂ ಕುರ್ವಂತು ಮೇ ಮಂಗಲಮ್ ॥ ೫ ॥

ಉಕ್ತಾನ್ಯೇ ನವಕೋಟಿದೇವನಿಚಯಾಃ ಕರ್ಮೋತ್ಥದೇವಾ ಮರು-
ದ್ಯುಕ್ತಾ ದಶಕಾಷ್ಠದೇವಶತಗಾಃ ಸರ್ವತ್ರಸೇನಾದಿಕಾಃ ।
ಮಿತ್ರಾದ್ಯಾಶ್ಚತುರೋ ನವಾಖಿಲಸುಹೃನ್ಮುಖ್ಯಾಃ ಪ್ರಮೋದಾಕರ-
ಶ್ಚೈಕರ್ಷಿಸ್ತ್ರಿಭೃಗುಪ್ರಸೂತ್ಯನಲಕಾಃ ಕುರ್ವಂತು ಮೇ ಮಂಗಲಮ್ ॥ ೬ ॥

ಶ್ರೀಮನ್ನಾರದ ಅಪ್ಪತಿರ್ಹಿ ವರುಣಃ ಸ್ವಾಯಂಭುವಾನೀ ರವಿಃ
ಸೋಮೋ ಧರ್ಮ ಇಮೇ ಚತುಃಸುರವರಾಃ ಪ್ರಾದ್ಯೋಽವಹಂತಾಭಿಧಃ ।
ಶಚ್ಯಾದ್ಯಾ ಷಡಹಂಕೃದಿಂದ್ರಮದನೌ ದ್ವೌ ವಾರುಣೀ ಪಾರ್ವತೀ
ಸೌಪರ್ಣೀ ತ್ರಿತಯಂ ಮಮ ಪ್ರತಿದಿನಂ ಕುರ್ವಂತು ಮೇ ಮಂಗಲಮ್ ॥ ೭ ॥

ಶ್ರೀಕೃಷ್ಣಾಂಗಸಮುತ್ಸುಕಂ ಸುಮಹಿಷೀಷಟ್ಕಂ ಮೃಡಾದಿತ್ರಿಕಂ
ವಾಣೀ ಶ್ರೀಭರತಸ್ಯ ಭವ್ಯಮಹಿಷೀ ಬ್ರಹ್ಮಾನಿಲೌ ಶ್ರೀರ್ಹರಿಃ ।

ಏವಂ ಸ್ತಂಬಪುರಸ್ಸರಾತ್ ಹರಿಪರಾತ್ ಸತ್ತಾರತಮ್ಯಾತ್ ಕ್ರಮಾತ್
ಪ್ರೀತಃ ಶ್ರೀಭರತಾರ್ಚಿತಃ ಪ್ರತಿದಿನಂ ಕುರ್ವಂತು ಮೇ ಮಂಗಲಮ್ ॥ ೮ ॥

॥ ಇತಿ ಶ್ರೀಮತ್ಕೂಪತಟಾಕೋಪಪದರಾಜಾಚಾರ್ಯಕೃತ್ಯನುಸಾರೇಣ ಸಾತ್ತ್ವಿಕ
ಶ್ರೀಮದ್ರಾಮಾಚಾರ್ಯವರ್ಯಕೃತ ತಾರತಮ್ಯಮಂಗಲಾಷ್ಟಕಮ್ ॥

*****

## ೯೫. ತಾರತಮ್ಯಮಂಗಲಾಷ್ಟಕಮ್ - ೨

ಶ್ರೀಮಾನ್ ವಿಷ್ಣುರನಂತಸದ್ಗುಣಗಣೈಃ ಶ್ರೇಷ್ಠಃ ಸ್ವತಂತ್ರಃ ಸದಾ
ಶ್ರೀದೇವೀ ಹ್ಯಧಮಾ ತತೋಽಮಿತಗುಣೈರ್ಬ್ರಹ್ಮಾ ಮರುಚ್ಚೇತ್ಯುಭೌ ।
ತಸ್ಯಾಃ ಕೋಟಿಗುಣಾಧಮೌ ಶತಗುಣೈರ್ಭಾರ್ಯೇ ತಯೋಶ್ಚಾಧಮೇ
ಶ್ರೀಶೇಷಾಸ್ತ್ವ ಇಮೇ ಸುರಾಃ ಪ್ರತಿದಿನಂ ಕುರ್ವಂತು ಮೇ ಮಂಗಲಮ್ ॥ ೧ ॥

ತಾಭ್ಯಾಂ ವೀಶಫಣೀಶಭೂತಗಣಪಾ ಹೀನಾಃ ಶತಾಂಶಾತ್ ತತೋ
ವಿಷ್ಣೋಃ ಷಟ್‌ಸ್ತ್ರಿಯ ಊನತಾಮುಪಗತಾಃ ಪಂಚಾಶತಸ್ತತ್ಸ್ತ್ರಿಯಃ ।
ತಾಭ್ಯಃ ಶತಗುಣಾಧಮಾಃ ಸ್ವಪತಿತೋ ಹೀನಾ ದಶಾಂಶಾಚ್ಚ ತಾಃ
ಶ್ರೀಶೇಷಾಸ್ತ್ವ ಇಮೇ ಸುರಾಃ ಪ್ರತಿದಿನಂ ಕುರ್ವಂತು ಮೇ ಮಂಗಲಮ್ ॥ ೨ ॥

ತಾಭ್ಯಃ ಶಕ್ರಮನೋಭವೌ ದಶಗುಣೈರ್ಹೀನಾವಹಂಕಾರಿಕ-
ಪ್ರಾಣಸ್ತದ್ದಶತೋಽವಮೋ ರತಿಮನೂ ದಕ್ಷಾನಿರುದ್ಧೌ ಗುರುಃ ।
ಇಂದ್ರಾಣೀ ಚ ತತೋಽಧಮಾ ದಶಗುಣೈಃ ಸರ್ವೇ ಮಿಥಸ್ತೇ ಸಮಾಃ
ಶ್ರೀಶೇಷಾಸ್ತ್ವ ಇಮೇ ಸುರಾಃ ಪ್ರತಿದಿನಂ ಕುರ್ವಂತು ಮೇ ಮಂಗಲಮ್ ॥ ೩ ॥

ಪಂಚೋನಃ ಪ್ರವಹಸ್ತತೋ ರವಿವಿಧೂ ಧರ್ಮಸ್ತಥಾ ಮಾನವೀ
ದ್ವಿನ್ಯೂನಾ ವರುಣಸ್ತತೋಽರ್ಧಸಹಿತಾತ್ ಪಾದಾದಧೋ ನಾರದಃ ।
ಸ್ವಲ್ಪೋನೋಽಥ ಭೃಗುಃ ಪ್ರಸೂತಿರನಲಃ ಪಾದಾದಧೋ ವಾರಿಪಾ-
ಚ್ಛ್ರೀಶೇಷಾಸ್ತ್ವ ಇಮೇ ಸುರಾಃ ಪ್ರತಿದಿನಂ ಕುರ್ವಂತು ಮೇ ಮಂಗಲಮ್ ॥ ೪ ॥

ತಾಭ್ಯೋ ಬ್ರಹ್ಮಸುತಾಸ್ತು ಕೌಶಿಕಮುನಿರ್ವೈವಸ್ವತಾಖ್ಯೋ ಮನುಃ
ಸ್ವಲ್ಪೋನಾಶ್ಚ ತತೋ ಗುರುಪ್ರವಹಯೋರ್ಭಾರ್ಯೇ ಚ ರಕ್ಷೋಧಿಪಃ ।
ಮಿತ್ರಃ ಕಿಂಚಿದಧೋಽಗ್ನಿತೋ ದ್ವಿಗುಣತೋ ಹೀನಾ ಮಿಥಸ್ತೇ ಸಮಾಃ
ಶ್ರೀಶೇಷಾಸ್ತ್ವ ಇಮೇ ಸುರಾಃ ಪ್ರತಿದಿನಂ ಕುರ್ವಂತು ಮೇ ಮಂಗಲಮ್ ॥ ೫ ॥

ವಿಷ್ವಕ್ಸೇನಗಣಾಧಿಪೌ ಧನಪತಿರ್ನಾಸತ್ಯದಸ್ರೌ ತಥಾ
ಸ್ವಲ್ಪೋನಾಃ ಕಥಿತಾ ವಸಿಷ್ಠವಿಬುಧಾಸ್ತೇಭ್ಯಃ ಶತಾಂತರ್ಗತಾಃ ।
ಏಭ್ಯಃ ಕಿಂಚಿದಧೋ ವಸಿಷ್ಠಮನವಶ್ಚೋತಥ್ಯಪೂರ್ವಾ ದ್ವಿಜಾಃ
ಶ್ರೀಶೇಷಾಸ್ತ ಇಮೇ ಸುರಾಃ ಪ್ರತಿದಿನಂ ಕುರ್ವಂತು ಮೇ ಮಂಗಲಮ್ ॥ ೬ ॥

ಯೇ ಚಾನ್ಯೇ ಸನಕಾದಯೋ ಗಯಮುಖಾ ರಾಜಾನ ಏತತ್ಸಮಾಃ
ಗಂಧರ್ವಾ ನರಾ ಬಲಿಪ್ರಭೃತಯೋ ದೇವಾ ಜಯಂತಾದಯಃ ।
ಧೂಮಾದ್ಯಾದ್ಯಭಿಮಾನಿದೈವತಗಣಾ ಯೇಽನ್ಯೇ ಪ್ರಸಿದ್ಧಾ ಗಣಾಃ
ಶ್ರೀಶೇಷಾಸ್ತ ಇಮೇ ಸುರಾಃ ಪ್ರತಿದಿನಂ ಕುರ್ವಂತು ಮೇ ಮಂಗಲಮ್ ॥ ೭ ॥

ಏತೇಭ್ಯೋಽಬ್ಧಿರವೀಂದುಧರ್ಮದಯಿತಾಃ ಪರ್ಜನ್ಯಕರ್ಮೌ ವಿರಾ-
ಡೀಷನ್ನ್ಯೂನಗುಣಾಸ್ತಥಾ ದ್ವಿಗುಣತೋ ಮಿತ್ರಾದಿತಶ್ಚಾಧಮಾಃ ।
ಏಭ್ಯೋ ಜ್ಞಾತಪದಾಶ್ಚ ಕಿಂಚಿದಧಮಾ ಯೇ ತತ್ರ ಶಿಷ್ಟಾಃ ಸುರಾಃ
ಶ್ರೀಶೇಷಾಸ್ತ ಇಮೇ ಸುರಾಃ ಪ್ರತಿದಿನಂ ಕುರ್ವಂತು ಮೇ ಮಂಗಲಮ್ ॥ ೮ ॥

ಏತೇಭ್ಯೋ ಜಲಪಾಂಗನಾ ಸಮುದಿತಾ ನ್ಯೂನೇತಿ ಕಿಂಚಿಚ್ಚ ಸಾ
ಗಂಗಾಯಾ ದ್ವಿಗುಣಾಧಮಾ ತ ಉದಪಃ ಸೋಮಾತ್ಮಜಶ್ಚಾಧಮಃ ।
ತಸ್ಮಾತ್ ಕಿಂಚಿದುಷಾಸ್ತ್ವಧೋ ದಶಗುಣೈಃ ಸ್ವಾಹಾಽತ ಊನಾ ತಥಾ
ಶ್ರೀಶೇಷಾಸ್ತ ಇಮೇ ಸುರಾಃ ಪ್ರತಿದಿನಂ ಕುರ್ವಂತು ಮೇ ಮಂಗಲಮ್ ॥ ೯ ॥

॥ ಇತಿ ತಾರತಮ್ಯಮಂಗಲಾಷ್ಟಕಮ್ ॥

★★★★★

## ೯೬. ಶ್ರೀತಾರತಮ್ಯಸ್ತುತಿಮಂಗಲಾಷ್ಟಕಮ್ (ಶ್ರೀಕಟ್ಟಮುದ್ದುರಮಣಕೃತ)

ಶ್ರೀವಿಷ್ಣೋರವಮಾ ರಮಾಽಖಿಲಗುಣೈರ್ಬ್ರಹ್ಮಾನಿಲೌ ಕೋಟಿಶ-
ಸ್ತನ್ನ್ಯೂನೇ ಚ ತದಂಗನೇ ಶತಗುಣನ್ಯೂನೇ ತಯೋಶ್ಚಾಧಮಾಃ ।
ಶೇಷಾದ್ಯಾಶ್ಚ ಶತೇನ ಪಂಚಗುಣತೋ ನೀಚಾಃ ಸ್ತ್ರಿಯಃ ಷಟ್ ತತೋ
ಗೌರ್ಯಾದ್ಯಾ ದ್ವಿಗುಣಾಧಮಾಃ ಪ್ರತಿದಿನಂ ಕುರ್ವಂತು ಮೇ ಮಂಗಲಮ್ ॥ ೧ ॥

ಸೌಪರ್ಣ್ಯಾದಿದಶಾಧಮೋ ಸುರಪತಿಃ ಕಾಮಶ್ಚ ತಾಭ್ಯಾಂ ದಶ
ನ್ಯೂನಃ ಪ್ರಾಣ ಉತಾನಿರುದ್ಧಮುಖರಾಃ ಷಟ್ ಪ್ರಾಗ್ದಶ ನ್ಯೂನಕಾಃ ।
ಷಣ್ಣಾಂ ಪಂಚಗುಣಾಧಮಃ ಪ್ರವಹಿಕಸ್ತಸ್ಯಾಧಮಾ ಮಾನವೀ-
ಚಂದ್ರಾರ್ಕಾ ದ್ವಿಗುಣಾಧಮಾಃ ಪ್ರತಿದಿನಂ ಕುರ್ವಂತು ಮೇ ಮಂಗಲಮ್ ॥ ೨ ॥

ತೇಷಾಂ ಪಾದಪದಾರ್ಧತಶ್ಚ ವರುಣೋ ಹೀನಸ್ತತೋ ನಾರದೋ
ಹೀನಃ ಪಾದಗುಣಸ್ತತೋ ಭೃಗುಮುನಿರ್ದಕ್ಷಾಂಗನಾಗ್ನಿಸ್ತ್ರಿಯಃ।
ನೀಚಾಃ ಸ್ವಲ್ಪಗುಣಾದುತೈತದವಮೌ ವೈವಸ್ವತೋ ಗಾಧಿಜಃ
ಸಪ್ತ ಬ್ರಹ್ಮಜತಾಪಸಾಃ ಪ್ರತಿದಿನಂ ಕುರ್ವಂತು ಮೇ ಮಂಗಲಮ್ ॥ ೩ ॥

ಪೂರ್ವೋಕ್ತಾನ್ನವಕಾದಪೀಷದವಮಾ ಗುರ್ವಂಗನಾ ಪ್ರಾವಹೀ
ಮಿತ್ರೋ ನಿರ್ಋತಿರಪ್ಯಥೋರ್ವರಿತಪಂಚಾಶೀತಿ ದೇವಾಶ್ಚ ಯೇ।
ವಿಷ್ವಕ್ಸೇನಗಣೇಶವಿತ್ತಪತಯಸ್ತತ್ತುಲ್ಯದೇವಾಶ್ಚ ಯೇ
ಮಿತ್ರಾತ್ ಕಿಂಚಿದಣುತ್ವಗಾಃ ಪ್ರತಿದಿನಂ ಕುರ್ವಂತು ಮೇ ಮಂಗಲಮ್ ॥ ೪ ॥

ಮುಖ್ಯಪ್ರಾಣ ಉಮಾಪತಿಪ್ರಭೃತಯೋ ರುದ್ರಾಶ್ಚ ವಾಚಸ್ಪತಿ-
ರ್ಧರ್ಮಶ್ಚಂದ್ರಹುತಾಶನಾವಿತಿ ಪಿತೃಷ್ವಗ್ರ್ಯಾ ಸ್ತ್ರಿಯಶ್ಚಾಶ್ವಿನೌ।
ಆದಿತ್ಯಾ ವಸವೋ ಮರುದೃಭುಗಣೋ ವಿಶ್ವೇ ಸುರಾ ರೋದಸೀ
ಏತಾ ವೈ ಶತದೇವತಾಃ ಪ್ರತಿದಿನಂ ಕುರ್ವಂತು ಮೇ ಮಂಗಲಮ್ ॥ ೫ ॥

ಮುಖ್ಯಪ್ರಾಣಗುರೂ ಪುರೈವ ಕಥಿತೌ ರುದ್ರೇಷು ಗೌರೀಪತಿಃ
ಪ್ರಾಣಶ್ಚ ಪ್ರವಹೋ ಮರುತ್ಸು ಪಿತೃಪಾ ಧರ್ಮೇಂದುವಹ್ನಿತ್ರಯಮ್।
ಷಟ್ ಸೂರ್ಯೇಷು ಚ ವಕ್ಷ್ಯಮಾಣಸಹಿತಾಃ ವಹ್ನಿರ್ವಸುಷ್ವೇಕಲಃ
ಪ್ರಾಗುಕ್ತಾಶ್ಚ ಚತುರ್ದಶ ಪ್ರತಿದಿನಂ ಕುರ್ವಂತು ಮೇ ಮಂಗಲಮ್ ॥ ೬ ॥

ವಹ್ನೇ ರೋದಿಜ ಉಕ್ತಶೇಷಮನವಶ್ಚೋಚಥ್ಯಮುಖ್ಯರ್ಷಯಃ
ಪೃಥ್ವಾದ್ಯಾ ಅಪಿ ಕರ್ಮಜಾ ಅಪಿ ಬಲಿರ್ಹ್ಯಷ್ಟೌ ಚ ಗಂಧರ್ವಪಾಃ।
ಪಿತ್ರ್ಯಗ್ರ್ಯಾ ಅಪಿ ಸಪ್ತಶೇಷಶತಕಾದಲ್ಪಾಧಮಾಃ ಪಾವಕಾ-
ದ್ಗಂಗಾದ್ಯಾಶ್ಚ ಷಡಲ್ಪತಃ ಪ್ರತಿದಿನಂ ಕುರ್ವಂತು ಮೇ ಮಂಗಲಮ್ ॥ ೭ ॥

ಪರ್ಜನ್ಯಾದಣವಶ್ಚ ಕೇಚಿದಮರಾಃ ತೇಭ್ಯೋಽಗ್ನಿಜಾಯಾಧಮಾ
ತಸ್ಯಾ ಅಪ್ಯವರೋ ಬುಧಸ್ತತ ಉಷಾ ನೀಚೋಷಸಃ ಸೂರ್ಯಜಃ।
ಪ್ರಹ್ಲಾದೋಽಪ್ಯಥ ಪುಷ್ಕರೋಽಪಿ ಚರಮಶ್ಚಾಜಾನಪಿತ್ರಾಹ್ವಯಾಃ
ಗಂಧರ್ವಾ ದ್ವಿವಿಧಾ ನೃಪಾ ನೃಷು ವರಾಃ ಪ್ರತಿದಿನಂ ಕುರ್ವಂತು ಮೇ ಮಂಗಲಮ್॥

ಮರ್ತ್ಯಾಶ್ಚಾಪಿ ಸುತಾರತಮ್ಯಸಹಿತಾ ವರ್ಣಾಶ್ರಮಾಚಾರಗಾಃ
ತನ್ನೀಚಾ ಅಥ ವರ್ಣಬಾಹ್ಯಸುಜನಾಸ್ತೇಭ್ಯೋಽಧಮಾಃ ಪಂಚಮಾಃ।
ತನ್ನೀಚಾಃ ಪಶವೋಽಥ ಪಕ್ಷಿಣ ಅಧೋ ನೀಚಾಶ್ಚ ಕೀಟಾದಯಃ
ತನ್ನೀಚಾ ಗಿರಿವೃಕ್ಷಗುಲ್ಮಲತಿಕಾಃ ಪ್ರತಿದಿನಂ ಕುರ್ವಂತು ಮೇ ಮಂಗಲಮ್ ॥ ೯ ॥

ಸಂಸಾರಭ್ರಮಧ್ಯತಸ್ತೃಣಗಣಾ ನೀಚಾಃ ಅಮೀ ಚ ಕ್ರಮಾತ್
ಸ್ವರ್ಭೂರ್ರೌರವಸಾಧನಪ್ರಚುರಕಾ ನೀಚಾಸ್ತಮೋಚೇತನಾಃ ।
ಮಿಥ್ಯಾಜ್ಞಾನಜನಾಸ್ತತೋಽಪಿ ಚರಮಾ ದುಸ್ತತ್ವಮಾನಾಸ್ತತೋ
ಕಿರ್ಮೀರಾದ್ಯತ ವಿಪ್ರಚಿತ್ತಿರಧಮಸ್ತಸ್ಮಾದಲಕ್ಷ್ಮೀಃ ಕಲಿಃ ॥ ೧೦ ॥

ಇತ್ಥಂ ಶ್ರೀವಿಧಿಪೂರ್ವಕಾಖಿಲಜಗಚ್ಛ್ರೀತಾರತಮ್ಯಸ್ತುತಿಂ
ಶ್ರೀಮದ್ವೇಂಕಟಪತ್ಯುದಾರವಿದುಷಾಂ ಶಿಷ್ಯೋಽವದದ್ಭಕ್ತಿತಃ ।
ತಚ್ಛಾಲೋಽಪಿ ಚ ಕಟ್ಟಿಮುದ್ದುರಮಣೋ ಮಧ್ವೇಶಸಂತುಷ್ಟಯೇ
ಯೇ ಶೃಣ್ವಂತಿ ಪಠಂತಿ ದಾಸ್ಯತಿ ಸುಖಂ ತೇಷಾಂ ಜಗತ್ಸ್ವಾಮೀ ಹರಿಃ ॥ ೧೧ ॥

॥ ಇತಿ ಶ್ರೀಕಟ್ಟಿಮುದ್ದುರಮಣಕೃತ ಶ್ರೀತಾರತಮ್ಯಸ್ತುತಿಮಂಗಲಾಷ್ಟಕಮ್ ॥

*****

## ೯೭. ತಾರತಮ್ಯಮಂಗಲಾಶಂಸನಮ್

ಲಕ್ಷ್ಮೀರ್ಯಸ್ಯ ಪರಿಗ್ರಹಃ ಕಮಲಭೂಃ ಸೂನುರ್ಗರುತ್ಮಾನ್ ರಥಃ
ಪೌತ್ರಶ್ಚಂದ್ರವಿಭೂಷಣಃ ಸುರಗುರುಃ ಶೇಷಶ್ಚ ಶಯ್ಯಾ ಪುನಃ ।
ಬ್ರಹ್ಮಾಂಡಂ ವರಮಂದಿರಂ ಸುರಗಣಾ ಯಸ್ಯ ಪ್ರಭೋಃ ಸೇವಕಾಃ
ಸ ತ್ರೈಲೋಕ್ಯಕುಟುಂಬಪಾಲನಪರಃ ಕುರ್ಯಾದ್ಧರಿರ್ಮಂಗಲಮ್ ॥ ೧ ॥

ಬ್ರಹ್ಮಾ ವಾಯುಗಿರೀಶಶೇಷಗರುಡಾ ದೇವೇಂದ್ರಕಾಮೌ ಗುರು-
ಶ್ಚಂದ್ರಾರ್ಕೌ ವರುಣಾನಲೌ ಮನುಯಮೌ ವಿತ್ತೇಶವಿಘ್ನೇಶ್ವರೌ ।
ನಾಸತ್ಯೌ ನಿರ್ಋತಿರ್ಮರುದ್ಗಣಯುತಾಃ ಪರ್ಜನ್ಯಮಿತ್ರಾದಯಃ
ಸಸ್ತ್ರೀಕಾಃ ಸುರಪುಂಗವಾಃ ಪ್ರತಿದಿನಂ ಕುರ್ವಂತು ನೋ ಮಂಗಲಮ್ ॥ ೨ ॥

॥ ಇತಿ ಶ್ರೀರಾಜರಾಜೇಶ್ವರತೀರ್ಥಕೃತ ಮಂಗಲಾಷ್ಟಕೇ ತಾರತಮ್ಯಮಂಗಲಾಶಂಸನಮ್ ॥

*****

॥ ಇತಿ ತಾರತಮ್ಯಸ್ತೋತ್ರಮಾಲಿಕಾ ॥

॥ ಇತಿ ಸ್ತೋತ್ರಮಾಲಿಕಾ - ೯ ॥

॥ ಶ್ರೀಕೃಷ್ಣಾರ್ಪಣಮಸ್ತು ॥

ಸಮರ್ಪಿತಂ ಮಯಾ ಭವೇತ್ ಸುಮಧ್ವನುತ್ತವಾಣಿನಾ ।
ರಮಾರಮೇಶಪಾದಯೋಃ ಪ್ರಭಂಜನಾಭಿಧಾಯುಜಾ ॥

******

## ಪರಿಶಿಷ್ಟ - ೧

### ತಾರತಮ್ಯಸದ್ರತ್ನಮಾಲಾದೀಪಿಕಾ

ವ್ಯಾಸತೀರ್ಥಮನೋಮಂಚೇ ಮಧ್ವಮಾನಸತಲ್ಪಕೇ ।
ಶಯಾನೌ ನೌಮಿ ಮತ್ಯರ್ಥಂ ಲಕ್ಷ್ಮೀನಾರಾಯಣೌ ಪ್ರಭೂ ॥

ತಾರತಮ್ಯಸ್ತವವ್ಯಾಖ್ಯಾಂ ಪಾಠಾರ್ಥಂ ಶ್ಲೋಕರೂಪತಃ ।
ಕೃತ್ವಾ ತಾಂ ವ್ಯಾಕರಿಷ್ಯೇಽಹಂ ವಿಟ್ಠಲೋ ಮಾನಪೂರ್ವಕಮ್ ॥ (ಆದಿ)

****

ತಾರತಮ್ಯಾದಿಸದ್ರತ್ನಮಾಲಾ ಮುಕ್ತಿಸುಖಪ್ರದಾ ।
ಪಾಠಾತ್ ಶ್ರುತೇಶ್ಚ ವಿದ್ವದ್ಭಿರ್ಧಾರ್ಯೇಯಂ ಹೃದಿ ಸರ್ವದಾ ॥ (ಅಂತ್ಯ)

॥ ಇತಿ ಶ್ರೀಮದ್ವಿದ್ವನ್ಮಣಿಮುಕುಟಮಣಿದಿಗಂತವಿಶ್ರಾಂತಮಹಾಕೀರ್ತಿಕಿರಣರಾಜಿರಾಜಮಾನ-ವ್ಯಾಸರಾಜಪ್ರಶಿಷ್ಯವಿಟ್ಠಲಾಚಾರ್ಯವಿರಚಿತಾವತಾರತಮ್ಯರತ್ನಮಾಲಾದೀಪಿಕಾ ॥

*****

## ಪರಿಶಿಷ್ಟ - ೨

### ತಾರತಮ್ಯನವಶ್ಲೋಕೀಮುಕ್ತಾಮಾಲಾ ದೀಪಿಕಾ

ವೇದವ್ಯಾಸಪದಾಂಭೋಜೇ ಭ್ರಮರಾಯಿತಮಾನಸಾನ್ ।
ಶ್ರೀನಿವಾಸಗುರೂನ್ ನತ್ವಾ ಯಾದವಾಚಾರ್ಯಶಿಕ್ಷಿತಾನ್ ॥

ತಚ್ಛಿಷ್ಯಾಣಾಂ ಕನಿಷ್ಠೇನ ವೇಂಕಟೇಶೇನ ತುಷ್ಟಯೇ ।
ಗುರೋರತ್ಯಲ್ಪಮತಿನಾ ಕ್ರಿಯತೇ ಭಾವದೀಪಿಕಾ ॥

ರಮಾವಿರಿಂಚಿಸರಸ್ವತೀಫಣಿಪತಿಪ್ರಮುಖಪ್ರವೀಣಗೀರ್ವಾಣಮಣಿಭಿರಭಿವಂದ್ಯ-ಸದಮಂದಸಾಂದ್ರಾನಂದಾದಿಗುಣವೃಂದಸ್ಯಂದೀಂದಿರಾವದನೇಂದೀವರಾನಂದ-ಪೂರ್ಣಚಂದ್ರಾಯಿತಭಗವತ್ಪಾದಾರವಿಂದಮಕರಂದಾಸ್ವಾದನಪರಮರಾಜಹಂಸೇನ ಗರುಡಾದ್ಯಮರಭ್ರಮರನಿಕರನಿರಂತರಪರಮಾದರಾಸ್ವಾದಿತರಮ್ಯಚರಣಾರವಿಂದ-ಸೌಂದರ್ಯಸೌರಭೇಣ ಭಗವತಾ ಮಧ್ವದೇವೇನ ಸ್ವಪ್ರಣೀತಗ್ರಂಥೇಷು ವಿಷ್ಣ್ವಾದಿ ದೇವತಾಕ್ರಮಃ ಕಥಿತಃ । ತತ್ಸಂಗ್ರಹರೂಪಾ ತಾರತಮ್ಯನವಶ್ಲೋಕೀಮುಕ್ತಾಮಾಲಾ ಗುರುಪ್ರಣೀತಾ । (ಆದಿ)

*****

ತಾರತಮ್ಯನವಶ್ಲೋಕೀತಿ ಸಮಾಹಾರದ್ವಿಗುಃ ನವಶ್ಲೋಕ್ಯಮೇವ ಮುಕ್ತಾಮಾಲಾ ಬುಧೈರ್ಹೃದಿ ಧ್ರಿಯತಾಮಿತಿ ಸಂಬಂಧಃ ।

ಶ್ರೀನಿವಾಸಾರ್ಯವರ್ಯಾಣಾಂ ವೇಂಕಟೇಶೇನ ಸೂನುನಾ ।
ಭೂಯಾತ್ ಕೃತೋ ಭಾವದೀಪಃ ಪ್ರೀತ್ಯೈ ಮಧ್ವಪತೇರ್ಹರೇಃ ॥
ತತ್ತ್ವಾಭಿಮಾನಿನೋ ದೇವಾ ಬ್ರಹ್ಮರುದ್ರಪುರಃಸರಾಃ ।
ಯತ್ಪರೀವಾರತಾಮಾಪ್ತಾಸ್ತಂ ವಂದೇ ಕಮಲಾಪತಿಮ್ ॥
ಗೃಹೀತುರಿವ ದೀಪಸ್ಯ ಸ್ಖಲನಂ ಸ್ಯಾತ್ ಪದೇಪದೇ ।
ತಥಾಽಪಿ ಮಮ ತತ್ ಸಂತಃ ಶೋಧಯಂತು ಕೃಪಾಯುತಾಃ ॥ (ಅಂತ್ಯ)

॥ ಇತಿ ಶ್ರೀಮದ್ಯದುಪತ್ಯಾಚಾರ್ಯಪೂಜ್ಯಪಾದಾರಾಧಕಶ್ರೀನಿವಾಸಾಚಾರ್ಯ ಗುರುಶೇಖರಕೃತಾಯಾಃ ತಾರತಮ್ಯನವಶ್ಲೋಕೀಮುಕ್ತಾವಲಾಯಾಃ ದೀಪಿಕಾ ತಚ್ಛಿಷ್ಯಾಣಾಂ ಕನಿಷ್ಠೇನ ವೇಂಕಟೇಶೇನ ವಿರಚಿತಾ ॥

*****

## ಪರಿಶಿಷ್ಟ - ೩

## ತಾರತಮ್ಯಪಂಚಶ್ಲೋಕೀವಿವೃತಿಃ

ಶ್ರೀಶೇಷಶಯನಂ ನೌಮಿ ನಿಃಶೇಷಗುಣಬೃಂಹಿತಮ್ ।
ಅಶೇಷದೋಷರಹಿತಂ ವಿಶೇಷಜ್ಞಂ ವಿಮುಕ್ತಿದಮ್ ॥
ಗುರುಃ ಶ್ರೀತಿರುಮಲಾಚಾರ್ಯಸೂರ್ಯೋ ಮೇ ಶರ್ಮ ಯಚ್ಛತು ।
ಸ್ವಾಂತಧ್ವಾಂತಧ್ವಂಸಕರ್ತಾ ಧರ್ಮಮಾರ್ಗಪ್ರದರ್ಶಕಃ ॥ (ಆದಿ)

ಇಹ ಖಲು ಸಜ್ಜನದಯಾಪರಹರಿಣಾ ದುರ್ವಾದಿಕುಯುಕ್ತಿಘನಾಚ್ಛನ್ನಂ ಶ್ರೀಮದ್ವೈಷ್ಣವಸಿದ್ಧಾಂತಭಾಸ್ಕರಂ ನಿಜಜನಾನ್ ಸಮ್ಯಕ್ ಗ್ರಾಹಯಿತುಂ ತದಾಚ್ಛಾದನಾಪನಯನೇ ಆಜ್ಞಪ್ತಃ ಶ್ರೀಮುಖ್ಯಪ್ರಾಣಃ, ಶ್ರೀಮನ್ಮಧ್ವಮುನಿತ್ವೇನ ಭುವ್ಯವತೀರ್ಯ ತದಾಜ್ಞಪ್ತಮಖಿಲಂ ಸಂಪಾದಿತವಾನ್ । ತತ್ರ ಮೋಕ್ಷೋ-ಪಯೋಗಿಜ್ಞಾನವಿಷಯಂ ತಾರತಮ್ಯಂ ಸ್ವಗ್ರಂಥೇ ಪ್ರಾಯೇಣ ಸ್ಥಾನೇ ಸ್ಥಾನೇ ನಿಬದ್ಧವಾನ್ । ಸರ್ವಂ ತದನುಸಂಧಾಯ ಕೇನಚಿತ್ ಸಿದ್ಧಾಂತಾಭಿಜ್ಞೇನ ಪಂಚಭಿಃ ಸ್ರಗ್ಧರಾವೃತ್ತಶ್ಲೋಕೈಃ ವಿಷ್ಣ್ವಾದಿದೇವತಾಕ್ರಮನಿಬಂಧಃ ಕೃತ ಇತಿ ಕೇಚಿತ್ । ಅನ್ಯೇ ತು ಶ್ರೀಮಧ್ವಾಚಾರ್ಯಾಣಾಂ ಜ್ಯೇಷ್ಠಭಗಿನ್ಯಾ ಕಲ್ಯಾಣೀದೇವೀನಾಮ್ನ್ಯಾ ತದುಪದೇಶಾನುಸಾರೇಣೇಯಂ ಪಂಚಶ್ಲೋಕೀ ಕೃತೇತ್ಯಾಹುಃ । ಸರ್ವಥಾಽಪೀಯಂ ಪಂಚಶ್ಲೋಕೀ ಮಧ್ವಶಾಸ್ತ್ರವೇದಿಭಿಃ ಪರಮಾದರೇಣ ಸ್ವೀಕೃತೇತಿ ಸಾ ವ್ಯಾಖ್ಯಾಯತೇ ।

*****

ಸುಪೂರ್ಣಸೌಖ್ಯಚಿದ್ಘನಂ ಹ್ಯಶೇಷದೋಷವರ್ಜಿತಮ್ ।
ವಿಶೇಷವಿದ್ವಿಮೋಕ್ಷದಂ ನಮಾಮಿ ವಿಟ್ಠಲಂ ಸಮಮ್ ॥

ಜಯತೀರ್ಥಗವೀಗುಂಫೇ ಪ್ರತ್ಯಹಂ ಯೋಽನ್ವಜಾಗರೀತ್ ।
ಸೇವೇ ಶ್ರೀತಿರುಮಲಾಚಾರ್ಯಂ ನಿರ್ಮಲಾಚಾರಭಾಸ್ಕರಮ್ ॥ (ಅಂತ್ಯ)

॥ ಇತಿ ಶ್ರೀಮದ್ವೇದೇಶತೀರ್ಥಜಗದ್ಗುರುಶ್ರೀಪಾದೋಪಸದವಿದ್ವದ್ವರ್ಯಶ್ರೀಮದ್ಯದುಪತ್ಯಾ-
ಚಾರ್ಯಪೂಜ್ಯಪಾದವಿನೇಯಶ್ರೀತಿರುಮಲಾಚಾರ್ಯಸೂರಿಸೂನುನಾ
ಪ್ರಹ್ಲಾದಕೃಷ್ಣಾಚಾರ್ಯೇಣ ರಚಿತಾ ತಾರತಮ್ಯವಿವೃತಿಃ ॥

*****

ಪರಿಶಿಷ್ಟ - ೪

## ತಾರತಮ್ಯಸ್ತೋತ್ರವ್ಯಾಖ್ಯಾನಮ್

ಶ್ರೀಮದಾನಂದತೀರ್ಥಾರ್ಯಹೃದಯಾಂಬುಜವಾಸಿನಮ್ ।
ಭೈಷ್ಮೀಸತ್ಯಾಸಮಾಶ್ಲಿಷ್ಟಂ ಕೃಷ್ಣಂ ವಂದೇ ಗುಣಾರ್ಣವಮ್ ॥
ಶ್ರೀಮದಾನಂದತೀರ್ಥಾರ್ಯತೀರ್ಥಾಂಭೋಧಿಂ ವಿಮಥ್ಯ ಯಃ ।
ದದೌ ಜ್ಞಾನಾಮೃತಂ ಮಹ್ಯಂ ತಂ ತೀರ್ಥಾರ್ಯಗುರುಂ ಭಜೇ ॥ ಆದಿ

ಭಗವದುತ್ಕರ್ಷಪ್ರತಿಪತ್ತಯೇ ಭಗವತ್ತಾದ್ವೈರ್ವಿಕ್ಷಿಪ್ತತಯೋಕ್ತಂ ಗುಣತಾರತಮ್ಯಂ ಸಂಗ್ರಹೇಣ ವಿವಕ್ಷುರಸ್ಮದಾಚಾರ್ಯವರ್ಯಃ ವಸ್ತುನಿರ್ದೇಶರೂಪಮಂಗಲಮಾಚರತಿ । ಜಯತೀತಿ ।

*****

ಗ್ರಂಥಾಂತರೇ ಸ್ವಗುರುಸ್ವನಾಮಾನುಸಂಧಾನವತಾಂ ಮಹಾಫಲಸಿದ್ಧಯೇ ತದ್ವದನು ಸ್ಮೃತಿಂ ಹರಾವರ್ಪಯತಿ । ಶ್ರೀವಿಠಲಾರ್ಯೇತಿ ।

ಪ್ರಸೀದತಾಂ ಮೇ ಗುರುವರ್ಯ ಏವ
ಮಾಂ ಲಕ್ಷಮೀಕ್ಷ್ಯ ಸ್ವಕೃತಸ್ತವಸ್ಯ ।
ವ್ಯಾಖ್ಯಾಕೃತಾವನುಜಜ್ಞೇಽಲ್ಪಬೋಧ -
ಮಷ್ಟಾದಶಾಬ್ದಂ ಪರಿಪೂರ್ಣಬೋಧಃ ॥

ಶ್ರೀವಿಠಲಾರ್ಯಪುತ್ರೇಣ ಶ್ರೀಮತ್ತೀರ್ಥಾರ್ಯಸೇವಿನಾ ।
ತಾರತಮ್ಯಸ್ತುತಿವ್ಯಾಖ್ಯಾ ಕೃತಾ ತತ್ಕರುಣಾಬಲಾತ್ ॥ ಅಂತ್ಯ

॥ ಇತಿ ಶ್ರೀಮದ್ವಿಠಲಾಚಾರ್ಯಸುತೇನ ಶ್ರೀತೀರ್ಥಾರ್ಯಚರಣಸೇವಿನಾ ಶ್ರೀನಿವಾಸೇನ
ವಿರಚಿತಾ ತಾರತಮ್ಯಮಣಿದೀಪಿಕಾ ॥

*****

## ತಾರತಮ್ಯಸಂಗ್ರಹದೀಪಿಕಾವ್ಯಾಖ್ಯಾ

ಸೇವೇಽಹಂ ಪೂರ್ಣಬೋಧಂ ತಂ ಬಾದರಾಯಣಶಿಷ್ಯಕಮ್ ।
ಶ್ರೀಮದ್ವೈಷ್ಣವಸಿದ್ಧಾಂತಸ್ಥಾಪಕಂ ವಾಯುರೂಪಿಣಮ್ ॥ ೧ ॥

ಭಜೇಽಹಂ ಯಾದವಾಚಾರ್ಯಾನ್ ಶ್ರೀನಿವಾಸಾಭಿಧಾಂಸ್ತಥಾ ।
ತತ್ಪುತ್ರಾನ್ ವೇಂಕಟಾಚಾರ್ಯಾನ್ ತಾರತಮ್ಯಾಂತಗಾನ್ ಗುರೂನ್ ॥ ೨ ॥

ಭಜೇಽಹಂ ಕೇಶವಾಚಾರ್ಯಕಲ್ಪದ್ರುಮಮನುತ್ತಮಮ್ ।
ಶಿಷ್ಯಶಾಖಾನ್ವಿತಂ ಸರ್ವಮೋಕ್ಷಾದಿಫಲದಂ ಶುಭಮ್ ॥ ೩ ॥

ಸೇವೇಽಹಂ ನರಸಿಂಹಾಖ್ಯಚಿಂತಾಮಣಿಮನುತ್ತಮಮ್ ।
ಚಿಂತಿತಾರ್ಥಪ್ರದಂ ನೃಣಾಂ ಭಜತಾಂ ಸ್ಮೃತಿಮಾತ್ರತಃ ॥ ೪ ॥

ಶ್ರೀಮುಷ್ಣವಾಸುದೇವಾಖ್ಯಾನಾಚಾರ್ಯಾನ್ ವೈಷ್ಣವೋತ್ತಮಾನ್ ।
ಶ್ರೀಮದಾನಂದತೀರ್ಥೀಯತೀರ್ಥಸಮ್ಯಕ್ಪ್ರವರ್ತಕಾನ್ ॥ ೫ ॥

ಯೈರಹಂ ಶಿಕ್ಷಿತಸ್ತತ್ತ್ವಮಾರ್ಗೇ ಸಮ್ಯಙ್ನಿವೇಶಿತಃ ।
ತಾನ್ ವಂದೇ ತತ್ತ್ವಸಾರಜ್ಞಾನ್ ವ್ಯಾಸಾಚಾರ್ಯಾಗ್ರಜಾನ್ ಗುರೂನ್ ॥ ೬ ॥

ಭಜೇಽಹಂ ವೈಷ್ಣವಾಚಾರ್ಯಾನ್ ಪೃಥ್ವೀಮಂಡಲಸಂಸ್ಥಿತಾನ್ ।
ವಿಜ್ಞಾತತಾರತಮ್ಯಾಂಸ್ತಾನ್ ಪೂರ್ಣಪ್ರಜ್ಞಮತಾನುಗಾನ್ ॥ ೭ ॥

ನತ್ವಾ ವಿಷ್ಣುಂ ಶ್ರಿಯಂ ವಾಯುಂ ಮದ್ವನಾಮ್ನಾಽಲ್ಪಬುದ್ಧಿನಾ ।
ಕ್ರಿಯತೇಽಲಂ ತಾರತಮ್ಯಸಾರಸಂಗ್ರಹದೀಪಿಕಾ ॥ ೮ ॥

ನ ಮಧ್ವಶಾಸ್ತ್ರವಿಜ್ಞಾನಂ ಪುರಾಣೋಪನಿಷತ್ಸು ಮೇ ।
ನ ವಿಜ್ಞಾನಂ ತಥಾಽಪೀದಂ ಕುರ್ವೇ ಶ್ರೀಗುರ್ವನುಗ್ರಹಾತ್ ॥ ೯ ॥

ನೋ ಹಸಂತು ನ ನಿಂದಂತು ತಾರತಮ್ಯಾಂತಗಾ ಬುಧಾಃ ।
ಅಬದ್ಧಂ ಮತ್ಕೃತಂ ಜ್ಞಾತ್ವಾ ಶೋಧಯಂತು ಪುನಃ ಪುನಃ ॥ ೧೦ ॥

ಅಗಾಧತಾರತಮ್ಯಂ ಕ್ವ ಕ್ವ ಚ ತತ್ರ ಮದಾಗ್ರಹಃ ।
ತಥಾಽಪಿ ಮಚ್ಛ್ರಮೋ ಭೂಯಾದ್ದೇವಾನಾಂ ಪ್ರೀತಿಕಾರಕಃ ॥ ೧೧ ॥

ತಾರತಮ್ಯಂ ತತೋ ಜ್ಞೇಯಂ ಸರ್ವೋಚ್ಚತ್ವಂ ಹರೇಸ್ತಥಾ ।
ಏತದ್ವಿನಾ ನ ಕಸ್ಯಾಪಿ ವಿಮುಕ್ತಿಃ ಸ್ಯಾತ್ ಕಥಂಚನ ॥ ೧೨ ॥

ತಾರತಮ್ಯಾಪರಿಜ್ಞಾನಾದನುತ್ಥಾನಂ ತಮೋ ವ್ರಜೇತ್ ।
ಇತ್ಯಾದಿಬಹುಮಾನಾನಾಂ ಸತ್ವಾದಾವಶ್ಯಕಂ ತ್ವಿದಮ್ ॥ ೧೩ ॥

ತಾರತಮ್ಯಪರಿಜ್ಞಾನಮತೋ ಲೋಕಕೃಪಾಲುಭಿಃ।
ಪೂರ್ಣಪ್ರಜ್ಞಾಚಾರ್ಯವರ್ಯೈಸ್ತತ್ರ ತತ್ರೋಪವರ್ಣಿತಮ್ ॥ ೧೪ ॥

ಸ್ವಗ್ರಂಥೇಽತ್ಯಂತದುರ್ಬೋಧೇ ದೇವೈಃ ಶೇಷಾದಿಕೈರಪಿ।
ಮಾನುಷೈಃ ಸ್ವಲ್ಪಮತಿಭಿಃ ಕಲಿಕಾಲಬಲಾದಿನಾ ॥ ೧೫ ॥

ಜ್ಞಾತುಂ ನ ಶಕ್ಯತೇಽಥಾಪಿ ಗುರೋರೇವ ಕೃಪಾಬಲಾತ್।
ಮಧ್ವನಾಮ್ನಾ ತಾರತಮ್ಯಸಾರಸಂಗ್ರಹ ಉತ್ತಮಃ ॥ ೧೬ ॥

ಕೃತಸ್ತ್ವಯಂ ಸ್ವಶಿಷ್ಯೇಣ ಗುರುರಾಜಾಭಿಧೇನ ಚ।
ವಿಜ್ಞಾಪಿತೇನ ತಸ್ಯಾಪಿ ತ್ವಲ್ಪಪ್ರಜ್ಞೈಃ ಸ್ವಶಿಷ್ಯಕೈಃ ॥ ೧೭ ॥

ಅರ್ಥೋ ಹಿ ಸಮ್ಯಗ್ವಿಜ್ಞಾತುಂ ನೈವೈಭಿಃ ಶಕ್ಯತೇ ತ್ವಿತಿ।
ಕ್ರಿಯತೇಽಲಂ ತಾರತಮ್ಯಸಾರಸಂಗ್ರಹದೀಪಿಕಾ ॥ ೧೮ ॥

ವಿಷ್ಣುಃ ಸರ್ವಗುಣೈಃ ಶ್ರೇಷ್ಠಶ್ಚಿದಚಿಜ್ಜಗತಃ ಸತಃ। (ಆದಿ)

*****

ಕೃತೇಯಂ ಕರವೀರಸ್ಥಾನಂತಾಚಾರ್ಯಸುತೇನ ವೈ।
ಮಧ್ವನಾಮ್ನಾ ತಾರತಮ್ಯಸಾರಸಂಗ್ರಹದೀಪಿಕಾ ॥

ಸಂವತ್ಸರೇ ಭಾವನಾಮ್ನಿ ಮಾಸೇ ಕಾರ್ತಿಕಸಂಜ್ಞಕೇ।
ಶುಕ್ಲಪಕ್ಷದ್ವಿತೀಯಾಯಾಂ ಸುಲಗ್ನೇ ಸುಮುಹೂರ್ತಕೇ ॥

ವಿಷ್ಣುವಾಯ್ವಾದಿದೇವಾನಾಂ ಗುರೂಣಾಂ ತು ಕೃಪಾಲವಾತ್।
ಸಮಾಪ್ತೇಯಂ ತಾರತಮ್ಯಸಾರಸಂಗ್ರಹದೀಪಿಕಾ ॥ (ಅಂತ್ಯ)

*****

## ಪರಿಶಿಷ್ಟ – ೬

## ತಾರತಮ್ಯರತ್ನದರ್ಪಣಮ್

ಜಯತಿ ಪರಾಶರಸೂನುಃ ಸತ್ಯವತೀಹೃದಯನಂದನೋ ವ್ಯಾಸಃ।
ಯಸ್ಯಾಸ್ಯಕಮಲಗಲಿತಂ ವಾಙ್ಮಯಮಮೃತಂ ಜಗತ್ ಪಿಬತಿ ॥

ಜಯತು ಶ್ರೀಮದಾನಂದತೀರ್ಥೇಂದುರ್ನೋ ಹೃದಂಬರೇ।
ಯದ್ವಚಶ್ಚಂದ್ರಿಕಾ ಸ್ವಾಂತಸಂತಾಪಂ ವಿನಿಕೃಂತತಿ ॥

ಕಲಾವೇಕಾದಶಾಬ್ದೋನೇ ಗತೇ ಪಂಚಸಹಸ್ರಕೇ।
ಸತ್ತುಷ್ಟ್ಯೈ ಶ್ರೀನಿವಾಸೇನ ರಚಿತಂ ರತ್ನದರ್ಪಣಮ್ ॥

॥ ಇತಿ ಶ್ರೀಗೋದಾವರೀತೀರನಿವಾಸಿನಾ ಪೀಠಿಕಾಪುರಸಂಸ್ಥಾನ ಪಂಡಿತೇನ ಶ್ರೀಮಧ್ವಸಿದ್ಧಾಂತೋನ್ನಾಹಿನೀ ಸಭಾ ಸಮ್ಮಾನಿತೇನ ಲೋಕಶ್ರೀನಿವಾಸಾಚಾರ್ಯೇಣ ರಚಿತಂ ತಾರತಮ್ಯರತ್ನದರ್ಪಣಮ್ ॥

*****

ಶ್ರೀಮನ್ಮರ್ತ್ಯಮೃಗೇಂದ್ರಪಾದಜಲಜದ್ವಂದ್ವ ದ್ವಿರೇಫಾಯಿತೋ
ಹೃದ್ವೈತಾಗಮವಿನ್ಮಹಾಗಜಘಟಾಸಂಚಾರಪಂಚಾನನಃ।
ಶ್ರೀಗಂಗಾಧರರಾಮಭೂಪತಿದಯಾಮುಖ್ಯಾಸ್ಪದಂ ರಾಜತೇ
ಶ್ರೀವತ್ಸಾನ್ವಯಸಿಂಧುಶೀತಕಿರಣಃ ಶ್ರೀಶ್ರೀನಿವಾಸಾರ್ಯಕಃ॥

ಶ್ರೀಗಂಗಾಧರರಾಮಭೂಪತಿಮಹಾರಾಜಾಧಿರಾಜಪ್ರಭೋಃ
ಶ್ರೀರಾಮಾಯಣ ಬೋಧನೇನ ಸಮಭೂತ್ ಸತ್ಪುತ್ರಲಾಭೋ ಯತಃ।
ಶ್ರೀಮನ್ಮಧ್ವಸದಾಗಮಾರ್ಥವಿಶದೀಕಾರಕ್ಷಮೋ ರಾಜತೇ
ಶ್ರೀವತ್ಸಾನ್ವಯಜೋ ದಿಗಂತಸುಯಶಾಃ ಶ್ರೀಶ್ರೀನಿವಾಸಾರ್ಯಕಃ॥

(ಇದಂ ತಚ್ಛಿಷ್ಯ ರಚಿತಂ ಶ್ಲೋಕದ್ವಯಮ್)

*****

# ದ್ವೈತತಾರತಮ್ಯಮ್

ಗುಣಪೂರ್ಣಸ್ಯ ವಿಷ್ಣೋಸ್ತು ನಿರ್ಗುಣತ್ವವಿಚಿಂತನಮ್ ।
ಜ್ಞಾನಾನಂದಾದಿಪೂರ್ಣಸ್ಯ ಸೋಽಹಮಿತ್ಯಾದಿಚಿಂತನಮ್ ॥ ೧ ॥

ಚಿದಾನಂದಾತ್ಮದೇಹಸ್ಯ ಹ್ಯುತ್ಪತ್ತ್ಯಾದಿವಿಚಿಂತನಮ್ ।
ಅಚ್ಛೇದ್ಯಾಭೇದ್ಯಗಾತ್ರಸ್ಯ ಚ್ಛೇದಭೇದಾದಿಚಿಂತನಮ್ ॥ ೨ ॥

ದೇವ್ಯಾ ನಿತ್ಯಾವಿಯೋಗಿನ್ಯಾ ವಿಯೋಗಾದಿವಿಚಿಂತನಮ್ ।
ಕ್ಲೇಶನಾಶಾದಿಶೂನ್ಯಸ್ಯ ಹರೇಃ ಶೋಕಾದಿಚಿಂತನಮ್ ॥ ೩ ॥

ವ್ಯಾಸರಾಮಾದಿರೂಪೇಷು ಋಷಿರೂಪತ್ವಚಿಂತನಮ್ ।
ಕೃಷ್ಣರಾಮಾದಿರೂಪೇಷು ಹ್ಯಂತರಸ್ಯ ವಿಚಿಂತನಮ್ ॥ ೪ ॥

ರಾಮಕೃಷ್ಣಾದಿರೂಪೇಷು ಪಾರಾವರ್ಯವಿಚಿಂತನಮ್ ।
ಸಂತಾನಾರ್ಥಂ ತು ಕೃಷ್ಣೇನ ಶಿವಪೂಜಾದಿಚಿಂತನಮ್ ॥ ೫ ॥

ರಾಮೇಣ ಪಾಪಯುಕ್ತೇನ ಲಿಂಗಸ್ಯ ಸ್ಥಾಪನಂ ಕೃತಮ್ ।
ಪಂಚಧಾತುಮಯೇ ಮೂರ್ತೌ ಹರಿರೂಪತ್ವವಿಚಿಂತನಮ್ ॥ ೬ ॥

ಸ್ವಯಂವ್ಯಕ್ತಸ್ಥಲೇ ಚಾಪಿ ಚಿದಾನಂದತ್ವಕಲ್ಪನಮ್ ।
ಪಿತೃಮಾತೃದ್ವಿಜಾತೀನಾಂ ರಿಪುರೂಪತ್ವಚಿಂತನಮ್ ॥ ೭ ॥

ಅಸ್ವತಂತ್ರಸ್ಯ ರುದ್ರಸ್ಯ ಹರಿರೂಪವಿಚಿಂತನಮ್ ।
ವಿಷ್ಣೋಃ ಸೂರ್ಯೇಣ ಸಾಕಂ ಚ ಹ್ಯಭೇದಾದಿವಿಚಿಂತನಮ್ ॥ ೮ ॥

ಸರ್ವೋತ್ತಮಃ ಸೂರ್ಯ ಏವ ವಿಷ್ಣ್ವಾದ್ಯಾಸ್ತಸ್ಯ ಕಿಂಕರಾಃ ।
ಇತ್ಯಾದಿಚಿಂತನಂ ದೋಷೋ ಹರಿನಿಂದೇತಿ ಚೋಚ್ಯತೇ ॥ ೯ ॥

ಸ್ವಯಂವ್ಯಕ್ತೇಷು ಲಿಂಗೇಷು ಹ್ಯಶ್ವತ್ಥತುಲಸೀಷು ಚ ।
ಶಾಲಗ್ರಾಮಂ ವಿಹಾಯ್ಯೈವ ನಮನಂ ಯೇ ಪ್ರಕುರ್ವತೇ ॥ ೧೦ ॥

ತೇ ಸರ್ವೇ ಹರಿನಿಂದಾಯಾಮಧಿಕಾರಿಣ ಏವ ಹಿ ।
ಮೋಕ್ಷಾಧಿಕಾರಿಣೋ ಯೇ ತು ಹ್ಯಜ್ಞಾನಾತ್ ಪರಮೇಶ್ವರಮ್ ॥ ೧೧ ॥

ಪಾರ್ಥಕ್ಯನಮನಂ ಯೇ ತು ಕುರ್ವಂತಿ ಯದಿ ವಾ ಪ್ರಭೋ ।
ತರ್ಹಿ ತೇಽಪಿ ಹಿ ಲೋಕೇಷು ದುಃಖಂ ಯಾಂತಿ ನ ಸಂಶಯಃ ॥ ೧೨ ॥

ಅತಃ ಪಾರ್ಥಕ್ಯನಮನಂ ಯೇ ಕುರ್ವಂತ್ಯೇಷು ಸರ್ವದಾ ।
ತೇ ಸರ್ವೇ ಹ್ಯಸುರಾ ಜ್ಞೇಯಾ ನಾತ್ರ ಕಾರ್ಯಾ ವಿಚಾರಣಾ ॥ ೧೩ ॥

ವಿವಾಹಶೂನ್ಯಮಶ್ವತ್ಥಂ ಪೂಜಯಂತಿ ನಮಂತಿ ಚ ।
ದ್ವಿಮಾಸಹೀನಾಂ ತುಲಸೀಮಪ್ರಸೂತಾಂ ಚ ಗಾಂ ನವಾಮ್ ॥ ೧೪ ॥

ತೇ ಸರ್ವೇ ಹ್ಯಸುರಾ ಜ್ಞೇಯಾ ನಾತ್ರ ಕಾರ್ಯಾ ವಿಚಾರಣಾ ।
ಗುಲ್ಮಾದ್ಯಾ ಮಾನುಷಾಂತಾಸ್ತೇ ಜ್ಞೇಯಾ ಬ್ರಹ್ಮವದ್ಗಣಾಃ ॥ ೧೫ ॥

ಬ್ರಹ್ಮಶತಾಯುಃಪರ್ಯಂತಮೇಕ ಏವ ಕಲಿಃ ಸ್ಮೃತಃ ।
ಕಲಿಸಂಜ್ಞಿಕನಾಮಾನಃ ಕಲೇರನ್ಯೇ ಚ ಸಂತಿ ಹಿ ॥ ೧೬ ॥

ತಸ್ಮಿನ್ ದಿನೇ ಬ್ರಹ್ಮರೂಪೇ ಗಚ್ಛಂತಿ ಚ ತಮೋಽಂತಿಕಮ್ ।
ತತ್ರ ಸ್ಥಿತ್ವಾ ಕಲೇರ್ಮಾರ್ಗಂ ಪ್ರತೀಕ್ಷಂತೇ ನ ಸಂಶಯಃ ॥ ೧೭ ॥

ಸಾಧಕೈರ್ವಿಷ್ಣುಕಾರ್ಯಾಣಾಂ ವಾಯುದಾಸ್ಯೈಃ ಪ್ರಪೀಡಿತಾಃ ।
ಶತವರ್ಷಾನಂತರಂ ಚ ಸರ್ವೇಷಾಂ ಕಲಿನಾ ಸಹ ॥ ೧೮ ॥

ವಾಯೋರ್ಗದಾಪ್ರಹಾರೇಣ ಲಿಂಗಭಂಗೋ ಭವಿಷ್ಯತಿ ।
ತಮೋಽಂಧಂ ಪ್ರವಿಶಂತ್ಯೇವ ತಾರತಮ್ಯೇನ ಸರ್ವಶಃ ॥ ೧೯ ॥

ತಮಸ್ಯಂಧೇಽಪಿ ಸಂಸಾರೇ ನಾತ್ರ ಕಾರ್ಯಾ ವಿಚಾರಣಾ ।
ಸರ್ವೇಷಾಮುತ್ತಮೋ ಜ್ಞೇಯಃ ಕಲಿರೇವ ನ ಸಂಶಯಃ ॥ ೨೦ ॥

ದೂಷಣೇ ವಿಷ್ಣುಭಕ್ತಾನಾಂ ತತ್ಸಮೋ ನಾಸ್ತಿ ಸರ್ವದಾ ।
ಸಂಸಾರೇ ಚಾಂಧತಮಸಿ ಸರ್ವತ್ರ ಹರಿದೂಷಕಃ ॥ ೨೧ ॥

ಮಿಥ್ಯಾಜ್ಞಾನೇ ಜ್ಞಾನಬುದ್ಧಿರ್ದುಃಖೇ ಚ ಸುಖಬುದ್ಧಿಮಾನ್ ।
ತಸ್ಮಾತ್ ಕಲಿಸಮೋ ಲೋಕೇ ಶಿವಭಕ್ತೋ ನ ಕುತ್ರಚಿತ್ ॥ ೨೨ ॥

ದುರ್ಯೋಧನಃ ಸ ಏವೋಕ್ತೋ ದುಃಖಾನಂತ್ಯಸ್ವರೂಪವಾನ್ ।
ತಸ್ಮಾಚ್ಛತಗುಣಾಂಶೋನಾ ಕಲಿಭಾರ್ಯಾ ತು ಸರ್ವದಾ ॥ ೨೩ ॥

ಅಲಕ್ಷ್ಮೀರಿತಿ ವಿಖ್ಯಾತಾ ಸಾ ಲೋಕೇ ಮಂಥರಾ ಸ್ಮೃತಾ ।
ತಸ್ಮಾದ್ದಶಗುಣಾಂಶೋನೋ ವಿಪ್ರಚಿತ್ತಿಸ್ತು ಸರ್ವದಾ ॥ ೨೪ ॥

ಜರಾಸಂಧಃ ಸ ಏವೋಕ್ತಃ ಕಾಲನೇಮಿಸ್ತತಃ ಪರಮ್ ।
ತಸ್ಮಾಚ್ಛತಗುಣಾಂಶೋನಃ ಸ ತು ಕಂಸೇತಿ ವಿಶ್ರುತಃ ॥ ೨೫ ॥

ಜರಾಸಂಧಃ ಸ ಏವೋಕ್ತಃ ಕಾಲನೇಮಿಸ್ತತಃ ಪರಮ್ ।
ತಸ್ಮಾಚ್ಛತಗುಣಾಂಶೋನಃ ಸ ತು ಕಂಸೇತಿ ವಿಶ್ರುತಃ ॥ ೨೬ ॥

ತಸ್ಮಾತ್ ಪಂಚಗುಣೈರ್ಹೀನೌ ಮಧುಕೈಟಭಸಂಜ್ಞಕೌ ।
ತಾವೇವ ಹಂಸಡಿಬಿಕೌ ಜ್ಞೇಯೌ ತೌ ಚ ಜನಾರ್ದನ ॥ ೨೭ ॥

ವಿಪ್ರಚಿತ್ತಿಸಮೋ ಜ್ಞೇಯೋ ಭೌಮೋ ವೈ ಭೂತಲೇ ಸ್ಮೃತಃ ।
ತಸ್ಮಾದಷ್ಟಗುಣೈರುಚ್ಚೋ ಹಿರಣ್ಯಕಶಿಪುಃ ಸ್ಮೃತಃ ॥ ೨೮ ॥

ತಸ್ಮಾಚ್ಚ ತ್ರಿಗುಣೈರ್ಹೀನೋ ಹಿರಣ್ಯಾಕ್ಷೋ ಮಹಾಸುರಃ ।
ಮಣಿಮಾಂಸ್ತತ್ಸಮೋ ಜ್ಞೇಯಃ ಕಿಂಚಿದೂನೋ ಬಕಃ ಸ್ಮೃತಃ ॥ ೨೯ ॥

ತಸ್ಮಾದ್ವಿಂಶದ್ಗುಣೈರ್ಹೀನಸ್ತಾರಕಾಖ್ಯೋ ಮಹಾಸುರಃ ।
ತಸ್ಮಾತ್ ಷಡ್ಗುಣತೋ ಹೀನಃ ಶಂಬರೋ ಲೋಕಕಂಟಕಃ ॥ ೩೦ ॥

ಶಂಬರಸ್ಯ ಸಮೋ ಜ್ಞೇಯಃ ಸಾಲ್ವೋ ದೈತ್ಯೇಷು ಚಾಧಮಃ ।
ಶಂಬರಾತ್ ತು ದ್ವಿಗುಣತೋ ಹಿಡಿಂಬೋ ನ್ಯೂನ ಉಚ್ಯತೇ ॥ ೩೧ ॥

ಬಾಣಸ್ತತೋಽಧಮೋ ಜ್ಞೇಯಃ ಸ ತು ಕೀಚಕನಾಮಕಃ ।
ದ್ವಾಪರಾಖ್ಯೋ ಮಹಾದೈತ್ಯೋ ಬಾಣಾಸುರಸಮಃ ಸ್ಮೃತಃ ॥ ೩೨ ॥

ತಸ್ಮಾದ್ದಶಗುಣೈರ್ಹೀನೋ ನಮುಚಿರ್ದೈತ್ಯಸತ್ತಮಃ ।
ನಮುಚೇಸ್ತು ಸಮೌ ಜ್ಞೇಯೌ ಪಾಕ ಇಲ್ವಲ ಇತ್ಯುಭೌ ॥ ೩೩ ॥

ತಸ್ಮಾಚ್ಛತಗುಣೈರ್ಹೀನೋ ವಾತಾಪಿರ್ದಾನವಾಧಮಃ ।
ತಸ್ಮಾತ್ ದಶಗುಣೈರ್ಹೀನೋ ಧೇನುಕೋ ನಾಮ ದೈತ್ಯರಾಟ್ ॥ ೩೪ ॥

ಧೇನುಕಾದರ್ಧಗುಣತಃ ಕೇಶೀ ದೈತ್ಯಸ್ತು ಚಾವರಃ ।
ಕೇಶಿದೈತ್ಯಸಮೋ ಜ್ಞೇಯಸ್ತೃಣಾವರ್ತೋ ಮಹಾಸುರಃ ॥ ೩೫ ॥

ತಮಸಾದ್ದಶಗುಣೈರ್ಹೀನೋ ಲವಣೋ ದೈತ್ಯಸತ್ತಮಃ ।
ತಸ್ಮಾತ್ ಪಂಚಗುಣೈರ್ಹೀನೋ ಧುಂಧುಮಾರೋ ಮಹಾಸುರಃ ॥ ೩೬ ॥

ತಸ್ಮಾದ್ದಷ್ಟಗುಣೈರ್ಹೀನೋ ಹಂಸೋನಾಮ ಮಹಾಸುರಃ ।
ಹಂಸಾಸುರಸಮೋ ಜ್ಞೇಯಃ ಪೌಂಡ್ರಕಾಖ್ಯೋ ಮಹಾಸುರಃ ॥ ೩೭ ॥

ವೇನಃ ಸ ಏವ ವಿಜ್ಞೇಯಃ ಪೂರ್ವಜನ್ಮನಿ ಸತ್ತಮ ।
ತಸ್ಮಾದೇಕಗುಣೈರ್ಹೀನೌ ಕುಭಾಂಡಕೂಪಕರ್ಣಕೌ ॥ ೩೮ ॥

ದುಃಶಾಸನಸ್ತು ವಿಜ್ಞೇಯೋ ಜರಾಸಂಧಸಮಃ ಪ್ರಭೋ।
ಕಂಸೇನ ತುಲ್ಯೋ ವಿಜ್ಞೇಯೋ ವಿಕರ್ಣೋ ದೈತ್ಯಸತ್ತಮಃ ॥ ೩೯ ॥

ಕೂಪಕರ್ಣಾಚ್ಛತಗುಣೈರ್ಹೀನೋ ರುಕ್ಮಸ್ತು ವಿಶ್ರುತಃ।
ತಸ್ಮಾಚ್ಛತಗುಣೈರ್ಹೀನಃ ಶತಧನ್ವಾ ಮಹಾಸುರಃ ॥ ೪೦ ॥

ತಸ್ಮಾಚ್ಛತಗುಣೈರ್ಹೀನೋ ರುಗ್ಮೀನಾಮ ಮಹಾಸುರಃ।
ಸಮಾನಸ್ತಸ್ಯ ವಿಜ್ಞೇಯಃ ಕಿರ್ಮೀರೋ ದೈತ್ಯಸತ್ತಮಃ।
ಕಾಲಕೇಯಸ್ತು ವಿಜ್ಞೇಯಃ ಸದಾ ವೇನಸಮೋ ಮತಃ ॥ ೪೧ ॥

ತಸ್ಮಾಚ್ಛತಗುಣೈರ್ಹೀನಶ್ಚಿತ್ತಮಾನ್ಯಸುರೋ ಮಹಾನ್।
ಶರೀರಸ್ಯಾಭಿಮಾನೀ ತು ತಸ್ಮಾಚ್ಛತಗುಣೈರ್ವರಃ ॥ ೪೨ ॥

ತಸ್ಮಾಚ್ಛತಗುಣೈರ್ಹೀನೋ ಹಸ್ತಮಾನ್ಯಸುರೋ ಮಹಾನ್।
ತಸ್ಮಾಚ್ಛತಗುಣೈರ್ಹೀನಃ ಪಾದಮಾನ್ಯಸುರೋ ಮಹಾನ್ ॥ ೪೩ ॥

ಶ್ರೋತ್ರೇಂದ್ರಿಯಾಭಿಮಾನೀ ತು ತಸ್ಮಾಚ್ಛತಗುಣಾವರಃ।
ಚಕ್ಷುರಿಂದ್ರಿಯಮಾನೀ ತು ತಸ್ಮಾಚ್ಛತಗುಣಾವರಃ ॥ ೪೪ ॥

ತಸ್ಮಾಚ್ಛತಗುಣೈರ್ಹೀನಃ ಸ್ಪರ್ಶಮಾನ್ಯಸುರೋ ಮಹಾನ್।
ತಸ್ಮಾಚ್ಛತಗುಣೈರ್ಹೀನೋ ವಾಙ್ಮಾನೀ ಹ್ಯಸುರೋ ಮಹಾನ್ ॥ ೪೫ ॥

ತಸ್ಮಾಚ್ಛತಗುಣೈರ್ಹೀನಃ ಶಿಶ್ನಮಾನ್ಯಸುರೋ ಮಹಾನ್।
ತಸ್ಮಾಚ್ಛತಗುಣೈರ್ಹೀನಃ ಕರ್ಮಮಾನ್ಯಸುರೋ ಮಹಾನ್ ॥ ೪೬ ॥

ಕಲ್ಯಾದ್ಯೈಃ ಪ್ರೇರಿತಾಃ ಸರ್ವೇ ರುದ್ರಾದ್ಯಾ ಅಧಿಕಾರಿಣಃ।
ಕದಾಚಿತ್ ಸುವಿರುದ್ಧಂ ಚ ಕುರ್ವಂತಿ ತವ ಸತ್ತಮ ॥ ೪೭ ॥

ಕದಾಽಪ್ಯಹಂ ಚ ವಾಯುಶ್ಚ ವಿರುದ್ಧಂ ನಾಚರೇವ ಭೋಃ।
ಮೂಲೇಷ್ವಂಶಾವತಾರೇಷು ರುದ್ರಾದೀನಾಂ ಮಹಾಪ್ರಭೋ ॥ ೪೮ ॥

ಬುದ್ಧಿರ್ವಿನಶ್ಯತೇ ಯಸ್ಮಾತ್ ತಸ್ಮಾಚ್ಛಿನ್ನಾ ಹಿ ತೇಽಖಿಲಾಃ।
ನ ಹೀಯತೇ ಚ ಮದ್ಬುದ್ಧಿಸ್ತಸ್ಮಾದಚ್ಛಿನ್ನಸಂಜ್ಞಕಃ ॥ ೪೯ ॥

ಏತಾದೃಶೋಽಪ್ಯಹಂ ದೇವ ನ ಚ ಶಕ್ತಃ ಸ್ತುತೌ ತವ।
ಮಹ್ಯಮಚ್ಛಿನ್ನಭಕ್ತಾಯ ದಯಾಂ ಕುರು ಮಹಾಪ್ರಭೋ ॥ ೫೦ ॥

ಇತಿ ಸ್ತುತ್ವಾ ಹರಿಂ ಬ್ರಹ್ಮಾ ಸ್ಥಿತಃ ಪ್ರಾಂಜಲಿರಗ್ರತಃ।

ಶ್ರೀಭಗವಾನುವಾಚ

ಸೃಷ್ಟ್ಯಾದ್ಯಶೇಷಕಾರ್ಯೇಷು ತ್ವಮೇವ ಮಮ ಬುದ್ಧಿಗಃ ॥ ೫೧ ॥

ತ್ವದ್ಬುದ್ಧಿಗಶ್ಚಾಹಮಜಸ್ತದ್ವದ್ವಾಯುರ್ಮಮ ಪ್ರಿಯಃ।
ತ್ವತ್ಕೃತಂ ಮತ್ಕೃತಂ ಮನ್ಯೇ ಹ್ಯಾವಾಭ್ಯಾಂ ಯಚ್ಚ ವಾಯುನಾ ॥ ೫೨ ॥

ಇತಿ ಬ್ರಹ್ಮಾಣಮಾದಿಶ್ಯ ಕೃಷ್ಣೋ ಗರುಡವಾಹನಃ।
ಸತ್ಯಯಾ ಸರ್ವದೇವೈಶ್ಚ ಯಯೌ ದ್ವಾರಾವತೀಂ ಹರಿಃ ॥ ೫೩ ॥

॥ ಇತಿ ಶ್ರೀಗರುಡಪುರಾಣೇ ದೈತ್ಯತಾರತಮ್ಯವರ್ಣನಮ್
(ಬ್ರಹ್ಮಕಾಂಡೇ - ದ್ವಾದಶೋऽಧ್ಯಾಯಃ) ॥

★★★★★

# ಹರಿಕಥಾಮೃತಸಾರ - ೧

## ಸಂಧಿ - ೧: ಮಂಗಳಾಚರಣ (ನಾಂದೀ) ಸಂಧಿ

[ ರಾಗ: ನಾಟ - ತ್ರಿಪುಟತಾಳ ]

ಹರಿಕಥಾಮೃತಸಾರ ಗುರುಗಳ
ಕರುಣದಿಂದಾಪನಿತು ಪೇಳುವೆ
ಪರಮಭಗವದ್ಭಕ್ತರಿದನಾದರದಿ ಕೇಳುವುದು ॥ ಪಲ್ಲವಿ ॥

ಶ್ರೀರಮಣಿಕರಕಮಲಪೂಜಿತ-
ಚಾರುಚರಣಸರೋಜ ಬ್ರಹ್ಮಸ-
ಮೀರವಾಣಿಫಣೀಂದ್ರವೀಂದ್ರಭವೇಂದ್ರಮುಖವಿನುತ।
ನೀರಜಭವಾಂಡೋದಯಸ್ಥಿತಿ-
ಕಾರಣನೆ ಕೈವಲ್ಯದಾಯಕ
ನಾರಸಿಂಹನೆ ನಮಿಪೆ ಕರುಣಿಪುದೆಮಗೆ ಮಂಗಳವ ॥ ೧ ॥

ಜಗದುದರನತಿವಿಮಲಗುಣರೂ-
ಪಗಳನಾಲೋಚನದಿ ಭಾರತ-
ನಿಗಮತತಿಗಳತಿಕ್ರಮಿಸಿ ಕ್ರಿಯಾವಿಶೇಷಗಳ।
ಬಗೆಬಗೆಯ ನೂತನವ ಕಾಣುತ
ಮಿಗೆ ಹರುಷದಿಂ ಪೊಗಳಿ ಹಿಗ್ಗುವ
ತ್ರಿಗುಣಮಾನಿ ಮಹಾಲಕುಮಿ ಸಂತೈಸಲನುದಿನವು ॥ ೨ ॥

ನಿರುಪಮಾನಂದಾತ್ಮಭವ ನಿ-
ರ್ಜರ ಸಭಾಸಂಸೇವ್ಯ ಋಜುಗಣ-
ದರಸೆ ಸತ್ವಪ್ರಚುರ ವಾಣೀಮುಖಸರೋಜೇನ।
ಗರುಡಶೇಷಶಶಾಂಕದಳಶೇ-
ಖರರ ಜನಕ ಜಗದ್ಗುರುವೆ ತ್ವ-
ಚ್ಚರಣಗಳಿಗಭಿವಂದಿಸುವೆ ಪಾಲಿಪುದು ಸನ್ಮತಿಯ ॥ ೩ ॥

ಆರು ಮೂರೆರಡೊಂದು ಸಾವಿರ
ಮೂರೆರಡುಶತಶ್ವಾಸಜಪಗಳ
ಮೂರುವಿಧಜೀವರೊಳಗಬ್ಜಜಕಲ್ಪಪರಿಯಂತ।

ತಾ ರಚಿಸಿ ಸಾತ್ವರಿಗೆ ಸುಖ ಸಂ-
ಸಾರ ಮಿಶ್ರರಿಗಧಮಜನರಿಗ-
ಪಾರದುಃಖಗಳೀವ ಗುರು ಪವಮಾನ ಸಲಹೆಮ್ಮ ॥ ೪ ॥

ಚತುರವದನನ ರಾಣಿ ಅತಿರೋ-
ಹಿತವಿಮಲವಿಜ್ಞಾನಿ ನಿಗಮ-
ಪ್ರತತಿಗಳಿಗಭಿಮಾನಿ ವೀಣಾಪಾಣಿ ಬ್ರಹ್ಮಾಣಿ।
ನತಿಸಿ ಬೇಡುವೆ ಜನನಿ ಲಕ್ಷ್ಮೀ-
ಪತಿಯ ಗುಣಗಳ ತುತಿಪುದಕೆ ಸ-
ನ್ಮತಿಯ ಪಾಲಿಸಿ ನೆಲೆಸು ನೀ ಮದ್ವದನಸದನದಲಿ ॥ ೫ ॥

ಕೃತಿರಮಣಪ್ರದ್ಯುಮ್ನನಂದನೆ
ಚತುರವಿಂಶತಿತತ್ತ್ವಪತಿದೇ-
ವತೆಗಳಿಗೆ ಗುರುವೆನಿಸುತಿಹ ಮಾರುತನ ನಿಜಪತ್ನಿ।
ಸತತ ಹರಿಯಲಿ ಗುರುಗಳಲಿ ಸ-
ದ್ರತಿಯ ಪಾಲಿಸಿ ಭಾಗವತಭಾ-
ರತಪುರಾಣರಹಸ್ಯತತ್ತ್ವಗಳರುಪು ಕರುಣದಲಿ ॥ ೬ ॥

ವೇದಪೀಠ ವಿರಿಂಚಿಭವಶ-
ಕ್ರಾದಿಸುರವಿಜ್ಞಾನದಾಯಕ
ಮೋದಚಿನ್ಮಯಗಾತ್ರ ಲೋಕಪವಿತ್ರ ಸುಚರಿತ್ರ।
ಭೇದಭೇದವಿಷಾದಕುಟಿಲಾಂ-
ತಾದಿಮಧ್ಯವಿದೂರ ಆದಾ-
ನಾದಿಕಾರಣ ಬಾದರಾಯಣ ಪಾಹಿ ಸತ್ರಾಣ ॥ ೭ ॥

ಕ್ಷಿತಿಯೊಳಗೆ ಮಣಿಮಂತ ಮೊದಲಾ-
ದತಿದುರಾತ್ಮರು ಒಂದಧಿಕವಿಂ-
ಶತಿಕುಭಾಷ್ಯವ ರಚಿಸೆ ನಡುಮನೆ ಎಂಬ ಬ್ರಾಹ್ಮಣನ।
ಸತಿಯ ಜಠರದೊಳವತರಿಸಿ ಭಾ-
ರತಿರಮಣ ಮಧ್ವಾಭಿಧಾನದಿ
ಚತುರದಶಲೋಕದಲಿ ಮೆರೆದಪ್ರತಿಮ ಗೊಂದಿಸುವೆ ॥ ೮ ॥

ಪಂಚಭೇದಾತ್ಮಕ ಪ್ರಪಂಚಕೆ
ಪಂಚರೂಪಾತ್ಮಕನೆ ದೈವಕ
ಪಂಚಮುಖಶಕ್ರಾದಿಗಳು ಕಿಂಕರರು ಶ್ರೀಹರಿಗೆ।

ಪಂಚವಿಂಶತಿತತ್ತ್ವತರತಮ
ಪಂಚಿಕೆಗಳನು ಪೇಳ್ದ ಭಾವಿವಿ-
ರಿಂಚಿಯೆನಿಪಾನಂದತೀರ್ಥರ ನೆನೆವೆನನುದಿನವು ॥ ೯ ॥

ವಾಮದೇವ ವಿರಿಂಚಿತನಯ ಉ-
ಮಾಮನೋಹರ ಉಗ್ರ ಧೂರ್ಜಟಿ
ಸಾಮಜಾಜಿನವಸನಭೂಷಣ ಸುಮನಸೋತ್ತಂಸ।
ಕಾಮಹರ ಕೈಲಾಸಮಂದಿರ
ಸೋಮಸೂರ್ಯಾನಲವಿಲೋಚನ
ಕಾಮಿತಪ್ರದ ಕರುಣಿಸೆಮಗೆ ಸದಾ ಸುಮಂಗಳವ ॥ ೧೦ ॥

ಕೃತ್ತಿವಾಸನೆ ಹಿಂದೆ ನೀ ನಾ-
ಲ್ವತ್ತುಕಲ್ಪ ಸಮೀರನಲಿ ಶಿ-
ಷ್ಯತ್ವ ವಹಿಸ್ಯಖಿಳಾಗಮಾರ್ಥಗಳೋದಿ ಜಲಧಿಯೊಳು।
ಹತ್ತುಕಲ್ಪದಿ ತಪವ ಗೈದಾ-
ದಿತ್ಯರೊಳಗುತ್ತಮನೆನಿಸಿ ಪುರು-
ಷೋತ್ತಮನ ಪರಿಯಂಕಪದವೈದಿದೆಯೊ ಮಹದೇವ ॥ ೧೧ ॥

ಪಾಕಶಾಸನಮುಖ್ಯಸಕಲದಿ-
ವೌಕಸರಿಗಭಿನಮಿಪೆ ಋಷಿಗಳಿ-
ಗೇಕಚಿತ್ತದಿ ಪಿತೃಗಳಿಗೆ ಗಂಧರ್ವಕ್ಷಿತಿಪರಿಗೆ।
ಆ ಕಮಲನಾಭಾದಿಯತಿಗಳ-
ನೀಕಕಾನಮಿಸುವೆನು ಬಿಡದೆ ರ-
ಮಾಕಳತ್ರನ ದಾಸವರ್ಗಕೆ ನಮಿಪೆನನವರತ ॥ ೧೨ ॥

ಪರಿಮಳವು ಸುಮನದೊಳಗನಲನು
ಅರಣಿಯೊಳಗಿಪ್ಪಂತೆ ದಾಮೋ-
ದರನು ಬ್ರಹ್ಮಾದಿಗಳ ಮನದಲಿ ತೋರಿ ತೋರದಲೆ।
ಇರುತಿಹ ಜಗನ್ನಾಥವಿಠಲನ
ಕರುಣ ಪಡೆವ ಮುಮುಕ್ಷು ಜೀವರು
ಪರಮಭಾಗವತರನು ಕೊಂಡಾಡುವುದು ಪ್ರತಿದಿನವು ॥ ೧೩ ॥

★★★★★★

ಪರಿಶಿಷ್ಟ - ೯

# ಹರಿಕಥಾಮೃತಸಾರ - ೨

## ಸಂಧಿ-೨೯: ಅಣುತಾರತಮ್ಯ ಸಂಧಿ

[ ರಾಗ ಸುರುಟ - ಅಟತಾಳ ]

ವಿಷ್ಣು ಸರ್ವೋತ್ತಮನು ಪ್ರಕೃತಿ ಕ-
ನಿಷ್ಠಳೆನಿಪಳನಂತಗುಣ ಪರ-
ಮೇಷ್ಠಿಪವನರು ಕಡಿಮೆ ವಾಣೀಭಾರತಿಗಳಧಮ।
ವಿಷ್ಣುವಾಹಫಣೀಂದ್ರಮೃಡರಿಗೆ
ಕೃಷ್ಣಮಹಿಷಿಯರಧಮರಿವರೊಳು
ಶ್ರೇಷ್ಠಳೆನಿಪಳು ಜಾಂಬವತಿ ಆವೇಶಬಲದಿಂದ ॥೧॥

ಪ್ಲವಗಪನ್ನಗಪಾಹಿಭೂಷಣ-
ಯುವತಿಯರು ಸಮ ತಮ್ಮೊಳಗೆ ಜಾಂ-
ಬವತಿಗಿಂತಲಿ ಕಡಿಮೆ ಇವರಿಂದಿಂದ್ರಕಾಮರಿಗೆ।
ಅವರ ಪ್ರಾಣನು ಕಡಿಮೆ ಕಾಮನ
ಕುವರ ಶಚಿ ರತಿ ದಕ್ಷ ಗುರು ಮನು
ಪ್ರವಹಮಾರುತ ಕೊರತೆ ಎನಿಸುವ ಆರುಜನರಿಂದ ॥೨॥

ಯಮದಿವಾಕರಚಂದ್ರಮಾನವಿ
ಸಮರು ಕೋಣಪಪ್ರವಹಗಧಮರು
ದ್ಯುಮಣಿಗಿಂದಲಿ ವರುಣ ನೀಚನು ನಾರದಾಧಮನು।
ಸುಮನಸಾಸ್ಯ ಪ್ರಸೂತಿ ಭೃಗುಮುನಿ
ಸಮರು ನಾರದಗಧಮ ಅತ್ರಿ-
ಪ್ರಮುಖ ವಿಶ್ವಾಮಿತ್ರ ವೈವಸ್ವತರನಲಗಧಮ ॥೩॥

ಮಿತ್ರ ತಾರಾ ನಿಋತಿ ಪ್ರವಹಾ-
ಪತ್ನಿ ಪ್ರಾವಹಿ ಸಮರು ವಿಶ್ವಾ-
ಮಿತ್ರಗಿಂತಲಿ ಕೊರತೆ ವಿಷ್ವಕ್ಸೇನ ಗಣನಾಥ।
ವಿತ್ತಪತಿ ಅಶ್ವಿನಿಗಳಧಮರು
ಮಿತ್ರಮೊದಲಾದವರಿಗಿಂತಲಿ
ಬಿತ್ತರಿಪೆನು ಶತಸ್ಥ ದಿವಿಜರ ವ್ಯೂಹನಾಮಗಳ ॥೪॥

ಮರುತರೊಂಭತ್ತಧಿಕ ನಾಲ್ವ-
ತ್ತೆರಡು ಅಶ್ವಿನಿ ವಿಶ್ವೆದೇವರು
ಎರಡಯಿದು ಹನ್ನೊಂದು ರುದ್ರರು ದ್ವಾದಶಾದಿತ್ಯ।
ಗುರುಪಿತೃತ್ರಯ ಅಷ್ಟವಸುಗಳು
ಭರತ ಭಾರತಿ ಪೃಥ್ವಿ ಋಭುವೆಂ-
ದರಿವದಿವರನು ಸೋಮರಸಪಾನಾರ್ಹರಹುದೆಂದು ॥ ೫ ॥

ಈ ದಿವೌಕಸರೊಳಗೆ ಉಕ್ತರು
ಐದಧಿಕದಶ ಉಳಿದ ಎಂಭ-
ತ್ತೈದು ಶೇಷರಿಗೆಣೆಯೆನಿಸುವರು ಧನವಿನಾಯಕರು।
ಸಾಧುವೈವಸ್ವತ ಸ್ವಯಂಭುವ
ಶ್ರೀದತಾಪಸರುಳಿದು ಮನು ಏ-
ಕಾದಶರು ವಿಘ್ನೇಶಗಿಂತಲಿ ನೀಚರೆನಿಸುವರು ॥ ೬ ॥

ಚ್ಯವನನಂದನ ಕವಿ ಬೃಹಸ್ಪತಿ-
ಯವರಜ ಉಚಥ್ಯಮುನಿ ಪಾವಕ
ಧ್ರುವ ನಹುಷ ಶಶಿಬಿಂದು ಪ್ರೀಯವ್ರತನು ಪ್ರಹ್ಲಾದ।
ಕುವಲಯಪರುಕ್ತೇತರಿಂದಲಿ
ಅವರ ರೋಹಿಣಿ ಶಾಮಲಾ ಜಾ-
ಹ್ನವಿ ವಿರಾಟ್ಪರ್ಜನ್ಯಸಂಜ್ಞಾದೇವಿಯರು ಅಧಮ ॥ ೭ ॥

ದ್ಯುನದಿಗಿಂತಲಿ ನೀಚರೆನಿಪರು
ಅನಭಿಮಾನಿ ದಿವೌಕಸರು ಕೇ-
ಚನಮುನಿಗಳಿಗೆ ಕಡಿಮೆ ಸ್ವಾಹಾದೇವಿಗಧಮ ಬುಧ।
ಎನಿಸುವಳುಷಾದೇವಿ ನೀಚಳು
ಶನಿ ಕಡಿಮೆ ಕರ್ಮಾಧಿಪತಿ ಸ-
ದ್ವಿನುತಪುಷ್ಕರ ನೀಚನೆನಿಸುವ ಸೂರ್ಯನಂದನಗೆ ॥ ೮ ॥

ಕೊರತೆಯೆನಿಪರಶೀತಿಋಷಿ ಪು-
ಷ್ಕರಗೆ ಉರ್ವಶಿಮುಖ್ಯ ಶತ ಅ-
ಪ್ಸರರು ತುಂಬುರುಮುಖರು ಆಜಾನಜರೆನಿಸುತಿಹರು।
ಕರೆಸುವುದು ಅನಲಗಣ ನಾಲ್ವ-
ತ್ತರೆ ಚತುರ್ದಶದ್ವ್ಯಷ್ಟಸಾವಿರ
ಹರಿಮಡದಿಯರು ಸಮರೆನಿಸುವರು ಪಿಂತೆ ಪೇಳ್ದರಿಗೆ ॥ ೯ ॥

ತದವರರನಾಖ್ಯಾತಅಪ್ಸರ
ಸುದತಿಯರು ಕೃಷ್ಣಾಂಗಸಂಗಿಗ-
ಳದರ ತರುವಾಯದಲಿ ಚಿರಪಿತರುಗಳು ಇವರಿಂದ।
ತ್ರಿದಶಗಂಧರ್ವಗಣ ಇವರಿಂ-
ದಧಮ ನರಗಂಧರ್ವರಿವರಿಂ-
ದುದಧಿಮೇಖಲಪತಿಗಳಧಮರು ನೂರುಗುಣದಿಂದ ॥ ೧೦ ॥

ಪೃಥ್ವಿಪತಿಗಳಿಗಿಂತ ಶತ ಮನು-
ಜೋತ್ತಮರು ಕಡಿಮೆನಿಪರಿವರಿಂ-
ದುತ್ತರೋತ್ತರ ನೂರುಗುಣದಿಂದಧಿಕರಾದವರ।
ನಿತ್ಯದಲಿ ಚಿಂತಿಸುತ ನಮಿಸುತ
ಭೃತ್ಯ ನಾನಹುದೆಂಬ ಭಕ್ತರ
ಚಿತ್ತದಲಿ ನೆಲೆಗೊಂಡು ಕರುಣಿಪರಖಿಳಸೌಖ್ಯಗಳ ॥ ೧೧ ॥

ದ್ರುಮಲತಾತೃಣಗುಲ್ಮಜೀವರು
ಕ್ರಮದಿ ನೀಚರು ಇವರಿಗಿಂತಾ-
ಧಮರೆನಿಸುವರು ನಿತ್ಯಬದ್ಧರಿಗಿಂತ ಅಜ್ಞಾನಿ।
ತಮೋಯೋಗ್ಯರ ಭೃತ್ಯರಧಮರು
ಅಮರುಷಾದ್ಯಭಿಮಾನಿ ದೈತ್ಯರು
ನಮುಚಿ ಮೊದಲಾದವರಿಗಿಂತಲಿ ವಿಪ್ರಚಿತಿ ನೀಚ ॥ ೧೨ ॥

ಅಲಕುಮಿಯು ತಾ ನೀಚಳೆನಿಪಳು
ಕಲಿ ಪರಮನೀಚತಮ ಅವನಿಂ-
ದುಳಿದ ಪಾಪಿಗಳಿಲ್ಲ ನೋಡಲು ಈ ಜಗತ್ತ್ರಯದಿ।
ಮಲವಿಸರ್ಜನಕಾಲದಲಿ ಕ-
ತ್ತಲೆಯೊಳಗೆ ಕಶ್ಮಲಕುಮಾರ್ಗ-
ಸ್ಥಳಗಳಲಿ ಚಿಂತನೆಯ ಮಾಳ್ಪದು ಬಲ್ಲವರು ನಿತ್ಯ ॥ ೧೩ ॥

ಸತ್ವಜೀವರ ಮಾನಿ ಬ್ರಹ್ಮನು
ನಿತ್ಯಬದ್ಧರೊಳಗೆ ಪುರಂಜನ
ದೈತ್ಯಸಮುದಾಯಾಧಿಪತಿ ಕಲಿಯೆನಿಪ ಪವಮಾನ।
ನಿತ್ಯದಲಿ ಅವರೊಳಗೆ ಕರ್ಮಪ್ರ-
ವರ್ತಕನು ತಾನಾಗಿ ಶ್ರೀಪುರು-
ಷೋತ್ತಮನ ಸಂಪ್ರೀತಿಗೋಸುಗ ಮಾಡಿ ಮಾಡಿಸುವ ॥ ೧೪ ॥

ಪ್ರಾಣದೇವನು ತ್ರಿವಿಧರೊಳಗೆ ಪ್ರ-
ವೀಣ ತಾನೆಂದೆನಿಸಿ ಅಧಿಕಾ-
ರಾನುಸಾರದಿ ಕರ್ಮಗಳ ತಾ ಮಾಡಿ ಮಾಡಿಸುವ।
ಜ್ಞಾನಭಕ್ತಿ ಸುರರ್ಗೆ ಮಿಶ್ರ-
ಜ್ಞಾನ ಮಧ್ಯಮಜೀವರಿಗೆ ಅ-
ಜ್ಞಾನ ಮೋಹ ದ್ವೇಷಗಳ ದೈತ್ಯರಿಗೆ ಕೊಡುತಿಪ್ಪ ॥ ೧೫ ॥
ದೇವದೈತ್ಯರ ತಾರತಮ್ಯವ
ಈ ವಿಧದಿ ತಿಳಿದೆಲ್ಲರೊಳು ಲ-
ಕ್ಷ್ಮೀವರನೆ ಸರ್ವೋತ್ತಮನು ಎಂದರಿತು ನಿತ್ಯದಲಿ।
ಸೇವಿಸುವ ಭಕ್ತರಿಗೊಲಿದು ಸುಖ-
ವೀವ ಸರ್ವತ್ರದಲಿ ಸುಖಮಯ
ಶ್ರೀವಿರಿಂಚಾದ್ಯಮರನುತ ಜಗನ್ನಾಥವಿಟ್ಠಲನು ॥ ೧೬ ॥

★★★★★

# ಹರಿಕಥಾಮೃತಸಾರ - ೩

## ಸಂಧಿ - ೨೩: ಬೃಹತ್ತಾರತಮ್ಯ ಸಂಧಿ

[ ರಾಗ: ಪೂರ್ವಿ - ರೂಪಕತಾಳ ]

ಶ್ರೀಧರಾದುರ್ಗಾಮನೋರಮ
ವೇಧಮುಖಸುಮನಸಗಣಸಮಾ-
ರಾಧಿತಪದಾಂಭೋಜ ಜಗದಂತರ್ಬಹಿರ್ವ್ಯಾಪ್ತ।
ಗೋಧರ ಫಣಿವರಾತಪತ್ರ ನಿ-
ಷೇಧದೋಷ ವಿಚಿತ್ರಕರ್ಮ ಸು-
ಬೋಧ ಸುಖಮಯಗಾತ್ರ ಪರಮಪವಿತ್ರ ಸುಚರಿತ್ರ ॥ ೧ ॥

ನಿತ್ಯ ನಿರ್ಮಲ ನಿಗಮವೇದ್ಯೋ-
ತ್ಪತ್ತಿಸ್ಥಿತಿಲಯದೋಷವರ್ಜಿತ
ಪ್ರತ್ಯಗಾತ್ಮ ಪ್ರಸಿದ್ಧ ಮುಕ್ತಾಮುಕ್ತಗಣಸೇವ್ಯ।
ಸತ್ಯಕಾಮ ಶರಣ್ಯ ಶಾಶ್ವತ
ಭೃತ್ಯವತ್ಸಲ ಭಯನಿವಾರಣ
ಅತ್ಯಧಿಕ ಸಂಪ್ರಿಯತಮ ಜಗನ್ನಾಥ ಮಾಂ ಪಾಹಿ ॥ ೨ ॥

ಪರಮಪುರುಷನ ರೂಪಗುಣವನು-
ಸರಿಸಿ ಕಾಂಬಳು ಪ್ರವಹದಂದದಿ
ನಿರುಪಮಳು ನಿರ್ದುಷ್ಟಸುಖಸಂಪೂರ್ಣಳೆನಿಸುವಳು।
ಹರಿಗೆ ಧಾಮತ್ರಯವೆನಿಸಿ ಆ-
ಭರಣವಸನಾಯುಧಗಳಾಗಿ-
ದ್ದರಿಗಳನ ಸಂಹರಿಸುವಳು ಅಕ್ಷರಳೆನಿಸಿಕೊಂಡು ॥ ೩ ॥

ಈತಗಿಂದಾನಂತಗುಣದಲಿ
ಶ್ರೀತರುಣಿ ತಾ ಕಡಿಮೆ ಎನಿಪಳು
ನೀತಮುಕ್ತಳು ನಿರ್ವಿಕಾರಳು ತ್ರಿಗುಣವರ್ಜಿತಳು।
ಧೌತಪಾಪವಿರಿಂಚಿಪವನರ
ಮಾತೆಯೆನಿಪ ಮಹಾಲಕುಮಿ ವಿ-
ಖ್ಯಾತಳಾಗಿಹಳೆಲ್ಲ ಕಾಲದಿ ಶ್ರುತಿಪುರಾಣದೊಳು ॥ ೪ ॥

ಕಮಲಸಂಭವಪವನರೀರ್ವರು
ಸಮರು ಸಮವರ್ತಿಗಳು ರುದ್ರಾ-
ದ್ಯಮರಗಣಸೇವಿತರು ಅಪರಬ್ರಹ್ಮನಾಮಕರು।
ಯಮಳರಿಗೆ ಮಹಲಕ್ಷ್ಮಿ ತಾ ಉ-
ತ್ತಮಳು ಕೋಟಿ ಸಜಾತಿಗುಣದಿಂ-
ದಮಿತ ಸುವಿಜಾತ್ಯಧಮರೆನಿಪರು ಬ್ರಹ್ಮವಾಯುಗಳು ॥ ೫ ॥

ಪತಿಗಳಿಂದ ಸರಸ್ವತೀಭಾ-
ರತಿಗಳಧಮರು ನೂರುಗುಣ ಪರಿ-
ಮಿತ ವಿಜಾತ್ಯವರರು ಬಲಜ್ಞಾನಾದಿಗುಣದಿಂದ।
ಅತಿಶಯಳು ವಾಗ್ದೇವಿ ಶ್ರೀಭಾ-
ರತಿಗೆ ಪದದ ಪ್ರಯುಕ್ತ ವಿಧಿಮಾ-
ರುತರವೋಲ್ ಚಿಂತಿಪುದು ಸದ್ಭಕ್ತಿಯಲಿ ಕೋವಿದರು ॥ ೬ ॥

ಖಗಪಫಣಿಪತಿಮೃಡರು ಸಮ ವಾ-
ಣಿಗೆ ಶತಗುಣಾವರರು ಮೂವರು
ಮಿಗಿಲೆನಿಸುವನು ಶೇಷ ಪದದಿಂದಲಿ ತ್ರಿಯಂಬಕಗೆ।
ನಗಧರನ ಷಣ್ಮಹಿಷಿಯರು ಪ-
ನ್ನಗವಿಭೂಷಣಗೈದು ಮೇನಕೆ-
ಮಗಳು ವಾರುಣಿ ಸೌಪರಣಿಗಳಿಗಧಿಕರೆರಡುಗುಣ ॥ ೭ ॥

ಗರುಡಶೇಷಮಹೇಶರಿಗೆ ಸೌ-
ಪರಣಿವಾರುಣಿಪಾರ್ವತೀ ಮೂ-
ವರು ದಶಾಧಮ ವಾರುಣಿಗೆ ಕಡಿಮೆನಿಸುವಳು ಗೌರಿ।
ಹರನ ಮಡದಿಗೆ ಹತ್ತುಗುಣದಲಿ
ಸುರಪಕಾಮರು ಕಡಿಮೆ ಇಂದ್ರಗೆ
ಕೊರತೆ ಎನಿಸುವ ಮನ್ಮಥನು ಪದದಿಂದಲಾವಾಗ ॥ ೮ ॥

ಈರಯಿದು ಗುಣಕಡಿಮೆ ಅಹಂ-
ಕಾರಿಕ ಪ್ರಾಣನು ಮನೋಜ ನ-
ಗಾರಿಗಳಿಗನಿರುದ್ಧ ರತಿ ಮನು ದಕ್ಷ ಗುರು ಶಚಿಯು।
ಆರು ಜನ ಸಮ ಪ್ರಾಣನಿಂದಲಿ
ಹೌರಗೆನಿಪರು ಹತ್ತು ಗುಣದಲಿ
ಮಾರಜಾದ್ಯರಿಗೈದುಗುಣದಿಂದಧಮ ಪ್ರವಹಾಖ್ಯ ॥ ೯ ॥

ಗುಣದ್ವಯಗಳಿಂ ಕಡಿಮೆ ಪ್ರವಹಗೆ
ಇನ ಶಶಾಂಕ ಯಮ ಸ್ವಯಂಭುವ-
ಮನುಮಡದಿ ಶತರೂಪ ನಾಲ್ವರು ಪಾದ ಪಾದಾರ್ಧ ।
ವನಧಿ ನೀಚ ಪದಾರ್ಧ ನಾರದ-
ಮುನಿಗೆ ಭೃಗ್ವಗ್ನಿ ಪ್ರಸೂತಿಗ-
ಳೆನಿಸುವರು ಪಾದಾರ್ಧಗುಣದಿಂದಧಮರಹುದೆಂದು ॥ ೧೦ ॥

ಹುತವಹಗೆ ದ್ವಿಗುಣಾಧಮರು ವಿಧಿ-
ಸುತಮರೀಚ್ಯಾದಿಗಳು ವೈವ-
ಸ್ವತನು ವಿಶ್ವಾಮಿತ್ರರಿಗೆ ಕಿಂಚಿದ್ಗುಣಾಧಮರು ।
ವ್ರತಿವರಜಗನ್ಮಿತ್ರ ವರನಿ-
ರ್ಋತಿಯು ಪ್ರಾವಹಿತಾರರಿಗೆ ಕಿಂ-
ಚಿತು ಗುಣಾಧಮ ಧನಪವಿಷ್ವಕ್ಸೇನರೆನಿಸುವರು ॥ ೧೧ ॥

ಧನಪವಿಷ್ವಕ್ಸೇನಗೌರೀ-
ತನಯರಿಗೆ ಉಕ್ತೇತರರು ಸಮ-
ರೆನಿಸುವರು ಎಂಭತ್ತಯಿದು ಜನ ಶೇಷಶತರೆಂದು ।
ದಿನಪರಾರೇಳಧಿಕ ನಾಲ್ವ-
ತ್ತನಿಲರೇಳ್ವಸುರುದ್ರರೀರೈ-
ದನಿತು ವಿಶ್ವೇದೇವ ಋಭು ಅಶ್ವಿನಿಯು ಪಿತೃ ಧರಣಿ ॥ ೧೨ ॥

ಇವರಿಗಿಂದಲಿ ಕೊರತೆಯೆನಿಪರು
ಚ್ಯವನಸನಕಾದಿಗಳು ಪಾವಕ
ಕವಿ ಉಚಥ್ಯಜಯಂತ ಕಶ್ಯಪ ಮನುಗಳೇಕದಶ ।
ಧ್ರುವ ನಹುಷ ಶಶಿಬಿಂದು ಹೈಹಯ
ದವುಷಯಂತಿ ವಿರೋಚನನ ನಿಜ-
ಕುವರ ಬಲಿ ಮೊದಲಾದ ಸಪ್ತೇಂದ್ರರು ಕಕುತ್ಸ್ಥಗಯ ॥ ೧೩ ॥

ಪೃಥು ಭರತ ಮಾಂಧಾತ ಪ್ರೀಯ-
ವ್ರತ ಮರುತ ಪ್ರಹ್ಲಾದ ಸುಪರೀ-
ಕ್ಷಿತ ಹರಿಶ್ಚಂದ್ರಾಂಬರೀಷೋತ್ತಾನಪಾದಮುಖ ।
ಶತಸುಪುಣ್ಯಶ್ಲೋಕರು ಗದಾ-
ಭೃತಗಧಿಷ್ಠಾನರು ಸುಪ್ರೀಯ-
ವ್ರತಗೆ ದ್ವಿಗುಣಾಧಮರು ಕರ್ಮಜರೆಂದು ಕರೆಸುವರು ॥ ೧೪ ॥

ನಳಿನಿ ಸಂಜ್ಞಾ ರೋಹಿಣೀ ಶ್ಯಾ-
ಮಲ ವಿರಾಟ್ ಪರ್ಜನ್ಯರಧಮರು
ಎಲರುಮಿತ್ರನ ಮಡದಿ ದ್ವಿಗುಣಾಧಮಳು ಬಾಂಬೊಳೆಗೆ।
ಜಲಮಯ ಬುಧಾಧಮನು ದ್ವಿಗುಣದಿ
ಕೆಳಗೆನಿಸುವಳುಷಾ ಶನೈಶ್ಚರ
ಇಳೆಗಳೀರುಗುಣಾಧಮರುಷಾದೇವಿದೆಸೆಯಿಂದ ॥ ೧೫ ॥

ಎರಡುಗುಣ ಕರ್ಮಾಧಿಪತಿ ಪು-
ಷ್ಕರ ಕಡಿಮೆ ಆಜಾನದಿವಿಜರು
ಚಿರಪಿತೃಗಳಿಂದುತ್ತಮರು ಕಿಂಕರರು ಪುಷ್ಕರಗೆ।
ಸುರಪನಾಲಯಗಾಯಕೋತ್ತಮ-
ರೆರಡಯಿದು ಗುಣದಿಂದಧಮ ತುಂ-
ಬುರಗೆ ಸಮ ನವಕೋಟಿಋಷಿಗಳು ನೂರು ಜನರುಳಿದು ॥ ೧೬ ॥

ಅವರವರ ಪತ್ನಿಯರು ಅಪ್ಸರ-
ಯುವತಿಯರು ಸಮ ಉತ್ತಮರನುಳಿ-
ದವರರೆನಿಪರು ಮನುಜಗಂಧರ್ವರು ದ್ವಿಷಡ್ಗುಣದಿ।
ಕುವಲಯಾಧಿಪರೀರಯಿದು ಗುಣ
ಅವನಿಪರ ಸ್ತ್ರೀಯರು ದಶೋತ್ತರ-
ನವತಿಗುಣದಿಂದಧಮರೆನಿಪರು ಮಾನುಷೋತ್ತಮರು ॥ ೧೭ ॥

ಸತ್ವ ಸತ್ವರು ಸತ್ವರಾಜಸ
ಸತ್ವ ತಾಮಸ ಮೂವರೂ ರಜ-
ಸತ್ವರಧಿಕಾರಿಗಳು ಭಗವದ್ಭಕ್ತರೆನಿಸುವರು।
ನಿತ್ಯಬದ್ಧ ರಜೋರಜರು ಉ-
ತ್ಪತ್ತಿಭೂಸ್ವರ್ಗದೊಳು ನರಕದಿ
ಪೃಥ್ವಿಯೊಳು ಸಂಚರಿಸುತಿಪ್ಪರು ರಜಸತಾಮಸರು ॥ ೧೮ ॥

ತಮಸು ಸಾತ್ವಿಕರೆನಿಸಿಕೊಂಬರು
ಅಮಿತನಾಖ್ಯಾತಸುರಗಣವುರೆ
ತಮಸು ರಾಜಸರೆನಿಸಿಕೊಂಬರು ದೈತ್ಯಸಮುದಾಯ।
ತಮಸುತಾಮಸ ಕಲಿಪುರಂಧ್ರಿಯು
ಅಮಿತದುರ್ಗುಣಪೂರ್ಣ ಸರ್ವಾ-
ಧಮರೊಳಧಮಾಧಮ ದುರಾತ್ಮನು ಕಲಿಯೆನಿಸಿಕೊಂಬ ॥ ೧೯ ॥

ಇವನ ಪೋಲುವ ಪಾಪಿಜೀವರು
ಭುವನ ಮೂರರೊಳಿಲ್ಲ ನೋಡಲು
ನವವಿಧ ದ್ವೇಷಗಳಿಗಾಕರನೆನಿಸಿಕೊಳುತಿಪ್ಪ ।
ಬವರದೊಳು ಭಂಗಾರದೊಳು ನಟ
ಯುವತಿ ದ್ಯೂತಾಪೇಯಮೃಷದೊಳು
ಕವಿಸಿ ಮೋಹವ ಕೆಡಿಸುವನು ಎಂದರಿದು ತ್ಯಜಿಸುವುದು ॥ ೨೦ ॥

ತ್ರಿವಿಧಜೀವಪ್ರತತಿಗಳ ಸ-
ಗ್ಗವೊಳೆಯಾಣ್ಮಾಲಯನು ನಿರ್ಮಿಸಿ ।
ಯುವತಿಯರ ಒಡಗೂಡಿ ಕ್ರೀಡಿಸುವನು ಕೃಪಾಸಾಂದ್ರ ।
ದಿವಿಜದಾನವತಾರತಮ್ಯದ
ವಿವರ ತಿಳಿವ ಮಹಾತ್ಮರಿಗೆ ಬಾ-
ನ್ನವಿರಸಖ ತಾನೊಲಿದು ಉದ್ಧರಿಸುವನು ಭವದಿಂದ ॥ ೨೧ ॥

ದೇವದೈತ್ಯರ ತಾರತಮ್ಯವು
ಪಾವಮಾನಿ ಮತಾನುಗರಿಗಿದು
ಕೇವಲಾವಶ್ಯಕವು ತಿಳಿವುದು ಸರ್ವಕಾಲದಲಿ ।
ದಾವಶಿಖಿ ಪಾಪಾಟವಿಗೆ ನವ-
ನಾವೆಯೆನಿಪುದು ಭವಸಮುದ್ರಕೆ
ಪಾವಟಗೆ ವೈಕುಂಠಲೋಕಕಿದೆಂದು ಕರೆಸುವುದು ॥ ೨೨ ॥

ತಾರತಮ್ಯಜ್ಞಾನ ಮುಕ್ತಿ-
ದ್ವಾರವೆನಿಪುದು ಭಕ್ತಜನರಿಗೆ
ತೋರಿ ಪೇಳಿ ಸುಖಾಬ್ಧಿಯೊಳು ಲೋಲ್ಯಾಡುವುದು ಬುಧರು ।
ಕ್ರೂರಮಾನವರಿಗಿದು ಕರ್ಣಕ-
ಠೋರವೆನಿಪುದು ನಿತ್ಯದಲಿ ಅಧಿ-
ಕಾರಿಗಳಿಗಿದನರುಪುವುದು ದುಸ್ತರ್ಕಗಳ ಬಿಟ್ಟು ॥ ೨೩ ॥

ಹರಿ ಸಿರಿ ವಿರಿಂಚೀರ ಭಾರತಿ
ಗರುಡ ಫಣಿಪತಿ ಷಣ್ಮಹಿಷಿಯರು
ಗಿರಿಜ ನಾಕೇಶ ಸ್ಮರ ಪ್ರಾಣಾನಿರುದ್ಧ ಶಚೀ ।
ಗುರು ರತೀ ಮನು ದಕ್ಷ ಪ್ರವಹಾ
ಮರುತ ಮಾನವಿ ಯಮ ಶಶಿ ದಿವಾ-
ಕರ ವರುಣ ನಾರದ ಸುರಾಸ್ಯ ಪ್ರಸೂತಿ ಭೃಗುಮುನಿಪ ॥ ೨೪ ॥

ವ್ರತತಿಜಾಸನಪುತ್ರರೆನಿಸುವ
ವ್ರತಿವರಮರೀಚ್ಯತ್ರಿವೈವ-
ಸ್ವತನು ತಾರಾಮಿತ್ರನಿರ್ಋತಿ ಪ್ರವಹಮಾರುತನ।
ಸತಿ ಧನೇಶಾಶ್ವಿನಿಗಳಿಗ್ಗಣ-
ಪತಿಯು ವಿಷ್ವಕ್ಸೇನ ಶೇಷಸು-
ಶತರು ಮನುಗಳುಚಥ್ಯಚ್ಯಾವನ ಮುನಿಗಳಿಗೆ ನಮಿಪೆ ॥ ೨೫ ॥

ಶತಸುಪುಣ್ಯಶ್ಲೋಕರೆನಿಸುವ
ಕ್ಷಿತಿಪರಿಗೆ ನಮಿಸುವೆನು ಭಾಗೀ-
ರಥಿ ವಿರಾಟ್ಪರ್ಜನ್ಯ ರೋಹಿಣಿ ಶ್ಯಾಮಲಾ ಸಂಜ್ಞಾ।
ಹುತವಹನ ಮಹಿಳಾ ಬುಧೋಷಾ
ಕ್ಷಿತಿ ಶನೈಶ್ಚರ ಪುಷ್ಕರರಿಗಾ-
ನತಿಸಿ ಬಿನ್ನೈಸುವೆನು ಭಕ್ತಿಜ್ಞಾನವಿಯಲೆಂದು ॥ ೨೬ ॥

ನೂರಧಿಕವಾಗಿಪ್ಪ ಮತ್ತಧಿ-
ನಾರುಸಾವಿರ ನಂದಗೋಪಕು-
ಮಾರನರ್ಧಾಂಗಿಯರಗಸ್ತ್ಯಾದೀ ಮುನೀಶ್ವರರು॥
ಉರ್ವಶೀ ಮೊದಲಾದ ಅಪ್ಸರ-
ನಾರಿಯರು ಶತ ತುಂಬುರರು ಕಂ-
ಸಾರಿ ಗುಣಗಳ ಕೀರ್ತನೆಯ ಮಾಡಿಸಲಿ ಎನ್ನಿಂದ ॥ ೨೭ ॥

ಪಾವನರು ಶುಚಿಶುದ್ಧನಾಮಕ-
ದೇವತೆಗಳಾಜಾನಚಿರಪಿತೃ-
ದೇವ ನರ ಗಂಧರ್ವರವನಿಪ ಮಾನುಷೋತ್ತಮರು।
ಈ ವಸುಮತಿಯೊಳುಳ್ಳ ವೈಷ್ಣವ-
ರಾವಳಿಯೊಳಿಹರೆಂದು ನಿತ್ಯದಿ
ಸೇವಿಪುದು ಸಂತೋಷದಿಂ ಸರ್ವಪ್ರಕಾರದಲಿ ॥ ೨೮ ॥

ಮಾನುಷೋತ್ತಮರನ ವಿಡಿದು ಚತು-
ರಾನನಾಂತ ಶತೋತ್ತಮತ್ವ ಕ್ರ-
ಮೇಣ ಚಿಂತಿಪ ಭಕ್ತರಿಗೆ ಚತುರವಿಧ ಪುರುಷಾರ್ಥ।
ಶ್ರೀನಿಧಿ ಜಗನ್ನಾಥವಿಟ್ಠಲ
ತಾನೆ ಒಲಿದೀವನು ನಿರಂತರ
ಸಾನುರಾಗದಿ ಪಠಿಸುವುದು ಪ್ರಾಜ್ಞರಿದ ಮರೆಯದಲೆ ॥ ೨೯ ॥

★★★★★

# ಹರಿಕಥಾಮೃತಸಾರ - ೪

## ಸಂಧಿ - ೨೦: ಆರೋಹಣತಾರತಮ್ಯ ಸಂಧಿ

[ ರಾಗ: ಮುಖಾರಿ - ಅಟತಾಳ ]

ಭಕ್ತರೆನಿಸುವ ದಿವ್ಯಪುರುಷರ
ಉಕ್ತಿ ಲಾಲಿಸಿ ಪೇಳ್ದ ಮುಕ್ತಾ-
ಮುಕ್ತಜೀವರ ತಾರತಮ್ಯವ ಮುನಿಪ ಶಾಂಡಿಲ್ಯ ॥ ಸಂಧಿಸೂಚನೆ ॥

ಸ್ಥಾವರರ ನೋಡಲ್ಕೆ ತೃಣಕ್ರಿಮಿ-
ಜೀವರುತ್ತಮ ಕ್ರಿಮಿಗಳಿಂದಲ-
ಜಾವಿ ಗೋ ಗಜ ವ್ಯಾಘ್ರ ಸಿಂಹಗಳಿಂದ ಶೂದ್ರಾದಿ।
ಮೂವರುತ್ತಮ ಕರ್ಮಕರ ಭೂ-
ದೇವ ಉತ್ತಮ ಕರ್ಮಿ ನೋಡಲು
ಕೋವಿದೋತ್ತಮ ಕವಿಗಳಿಂದಲಿ ಕ್ಷಿತಿಪರುತ್ತಮರು ॥ ೧ ॥

ಧರಣಿಪರ ನೋಡಲ್ಕೆ ನರಗಂ-
ಧರ್ವರುತ್ತಮ ದೇವಗಂಧ-
ರ್ವರ ಗಣೋತ್ತಮ ಇವರಿಗಿಂದ ಶತೋನ ಶತಕೋಟಿ।
ಪರಮ ಋಷಿಗಳು ಅಪ್ಸರ ಸ್ತ್ರೀ-
ಯರು ಸಮಾನರು ಇವರಿಗಿಂತಲಿ
ಚಿರಪಿತೃಗಳುತ್ತಮರು ಚಿರನಾಮಕ ಪಿತೃಗಳಿಂದ ॥ ೨ ॥

ಎರಡಯಿದು ಎಂಭತ್ತು ಋಷಿ ತುಂ-
ಬುರು ಶತೋರ್ವಶಿಯಪ್ಸರಸ್ತ್ರೀ-
ಯರು ಶತಾಜಾನಜರು ಉತ್ತಮ ಚಿರಪಿತೃಗಳಿಂದ।
ವರರು ಉರ್ವಶಿಗಿಂತ ವೈಶ್ವಾ-
ನರನ ಸುತರೀರೆಂಟುಸಾವಿರ
ಹರದೆಯರೊಳುತ್ತಮ ಕಶೇರೆಪ್ಪತ್ತುನಾಲ್ಕು ಜನ ॥ ೩ ॥

ಸರಿಯೆನಿಪರು ವ್ರಜೌಕಸಸ್ತ್ರೀ-
ಯರು ಸುರಾಸ್ಯಾತ್ಮಜರಿಗೀ ಪು-
ಷ್ಕರನು ಕರ್ಮಪ ಪುಷ್ಕರನಿಗೆ ಶನೈಶ್ಚರುತ್ತಮನು।
ತರಣಿಜನಿಗುತ್ತಮಳುಷಾಶ್ವಿನಿ-
ಸುರರರಸಿಗುತ್ತಮ ಜಲಪ ಬುಧ
ಶರಧಿಜಾತ್ಮಜಗುತ್ತಮ ಸ್ವಹದೇವಿ ಎನಿಸುವಳು ॥ ೪ ॥

ಅನಳಭಾರ್ಯಳಿಗಿಂದನಾಖ್ಯಾ-
ತನಿಮಿಷರನಾಖ್ಯಾತರಿಂದಲಿ
ಘನಪಪರ್ಜನ್ಯಾನಿರುದ್ಧನ ಸ್ತ್ರೀ ಉಷಾದೇವಿ।
ದ್ಯುನದಿ ಸಂಜ್ಞಾ ಶ್ಯಾಮಲಾ ರೋ-
ಹಿಣಿಗಳೈವರು ಸಮರನಾಖ್ಯಾ-
ತನಿಮಿಷೋತ್ತಮರಿವರಿಗಿಂದಲಿ ನೂರುಕರ್ಮಜರು ॥ ೫ ॥

ಪೃಥು ನಹುಷ ಶಶಿಬಿಂದು ಪ್ರೀಯ-
ವ್ರತ ಪರೀಕ್ಷಿತನೃಪರು ಭಾಗೀ-
ರಥಿಯ ನೋಡಲ್ಕಧಿಕ ಬಲ್ಯಾದಿಂದ್ರಸಪ್ತಕರು।
ಪಿತೃಗಳೇಳೆಂಟಧಿಕವಪ್ಸರ-
ಸತಿಯರೀರೈದೊಂದು ಮನುಗಳು
ದಿತಿಜಗುರು ಚ್ಯಾವನ ಉಚಥ್ಯರು ಕರ್ಮಜರ ಸಮರು ॥ ೬ ॥

ಧನಪ ವಿಷ್ವಕ್ಸೇನ ಗಣಪಾ-
ಶ್ವಿನಿಗಳೆಂಭತ್ತೈದು ಶೇಷರಿ-
ಗೆಣೆಯೆನಿಸುವರು ಮಿತ್ರ ತಾರಾ ನಿಋತಿ ಪ್ರಾವಾಹಿ।
ಗುಣಗಳಿಂದೈದಧಿಕ ಎಂಭ-
ತ್ತೆನಿಪ ಶೇಷರಿಗುತ್ತಮರು ಸ-
ನ್ಮುನಿ ಮರೀಚಿ ಪುಲಸ್ತ್ಯ ಪುಲಹಾ ಕ್ರತು ವಸಿಷ್ಠಮುಖ ॥ ೭ ॥

ಅತ್ರಿಯಂಗಿರರೇಳು ಬ್ರಹ್ಮನ
ಪುತ್ರರಿವರಿಗೆ ಸಮರು ವಿಶ್ವಾ-
ಮಿತ್ರವೈವಸ್ವತರು ಈಶಾವೇಶಬಲದಿಂದ ॥
ಮಿತ್ರಗಿಂತುತ್ತಮರು ಸ್ವಾಹಾ-
ಭರ್ತೃ ಭೃಗುವು ಪ್ರಸೂತಿ ವಿಶ್ವಾ-
ಮಿತ್ರ ಮೊದಲಾದವರಿಗಿಂದಲಿ ಮೂವರುತ್ತಮರು ॥ ೮ ॥

ನಾರದೋತ್ತಮನಗ್ನಿಗಿಂತಲಿ
ವಾರಿನಿಧಿ ಪಾದೋತ್ತಮನು ಯಮ
ತಾರಕೇಶ ದಿವಾಕರನು ಶತರೂಪರುತ್ತಮರು।
ವಾರಿಜಾಪ್ತನಿಗಿಂತ ಪ್ರವಹಾ
ಮಾರುತೋತ್ತಮ ಪ್ರವಹಗಿಂತಲಿ
ಮಾರಪುತ್ರನಿರುದ್ಧ ಗುರು ಮನು ದಕ್ಷ ಶಚಿ ರತಿಯು ॥ ೯ ॥

ಆರುಜನಗಳಿಗಿಂತಲಾಹಂ-
ಕಾರಿಕಪ್ರಾಣೋತ್ತಮಖಿಳಶ-
ರೀರಮಾನಿ ಪ್ರಾಣಗಿಂತಲಿ ಕಾಮ ಇಂದ್ರರಿಗೆ।
ಗೌರಿ ವಾರುಣಿ ಖಗಪರಾಣೆಗೆ
ಶೌರಿಮಹಿಷಿಯರೊಳಗೆ ಜಾಂಬವ-
ತೀ ರಮಾಯುತಳಾದ ಕಾರಣ ಅಧಿಕಳೆನಿಸುವಳು ॥ ೧೦ ॥

ಹರಫಣಿಪವಿಹಗೇಂದ್ರ ಮೂವರು
ಹರಿಮಡದಿಯರಿಗುತ್ತಮರು ಸೌ-
ಪರಣಿಪತಿಗುತ್ತಮರು ಭಾರತಿವಾಣಿ ಈರ್ವರಿಗೆ।
ಮರುತಬ್ರಹ್ಮರು ಉತ್ತಮರು ಇಂ-
ದಿರೆಯು ಪರಮೋತ್ತಮಳು ಲಕ್ಷ್ಮಿಗೆ
ಸರಿಯೆನಿಸುವವರಿಲ್ಲವೆಂದಿಗು ದೇಶಕಾಲದೊಳು ॥ ೧೧ ॥

ಶ್ರೀಮುಕುಂದನ ಮಹಿಳೆ ಲಕ್ಷ್ಮಿ ಮ-
ಹಾಮಹಿಮೆಗೇನೆಂಬೆ ಬ್ರಹ್ಮೇ-
ಶಾಮರೇಂದ್ರರ ಸೃಷ್ಟಿಸ್ಥಿತಿ ಲಯಗೈಸಿ ಅವರವರ।
ಧಾಮಗಳ ಕಲ್ಪಿಸಿಕೊಡುವಳಜ-
ರಾಮರಣಳಾಗಿರ್ದು ಸರ್ವ-
ಸ್ವಾಮಿ ಮಮ ಗುರು ಎಂದುಪಾಸನೆ ಮಾಳ್ಪಳಚ್ಯುತನ ॥ ೧೨ ॥

ಈಸು ಮಹಿಮೆಗಳುಳ್ಳ ಲಕ್ಷ್ಮಿ ಪ-
ರೇಶನಾನಂತಾಂಶಗುಣದೊಳು
ಲೇಶಲೇಶಕೆ ಸರಿಯೆನಿಸಳಾವಾವ ಕಾಲದಲಿ।
ದೇಶಕಾಲಾತೀತ ಲಕ್ಷ್ಮಿಗೆ
ಕೇಶವನ ವಕ್ಷಸ್ಥಳವೆ ಅವ-
ಕಾಶವಾಯಿತು ಇವನ ಮಹಿಮೆಗೆ ವ್ಯಾಪ್ತಿಗೆಣೆಯುಂಟೆ ॥ ೧೩ ॥

ಒಂದುರೂಪದೊಳೊಂದವಯವದೊ-
ಳೊಂದು ರೋಮದೊಳೊಂದು ದೇಶದಿ
ಪೊಂದಿಕೊಂಡಿಹರಜಭವಾದಿ ಸಮಸ್ತಜೀವಗಣ।
ಸಿಂಧು ಸಪ್ತ ದ್ವೀಪ ಮೇರು ಸು-
ಮಂದರಾದ್ಯದ್ರಿಗಳು ಬ್ರಹ್ಮ ಪು-
ರಂದರಾದಿ ಸಮಸ್ತಲೋಕಪರಾಲಯಗಳೆಲ್ಲ ॥ ೧೪ ॥

ಸರ್ವದೇವೋತ್ತಮನು ಸರ್ವಗ
ಸರ್ವಗುಣಸಂಪೂರ್ಣ ಸರ್ವದ
ಸರ್ವತಂತ್ರಸ್ವತಂತ್ರ ಸರ್ವಾಧಾರ ಸರ್ವಾತ್ಮಾ।
ಸರ್ವತೋಮುಖ ಸರ್ವನಾಮಕ
ಸರ್ವಜನಸಂಪೂಜ್ಯ ಶಾಶ್ವತ
ಸರ್ವಕಾಮದ ಸರ್ವಸಾಕ್ಷಿಗ ಸರ್ವಜಿತ್ ಸರ್ವ ॥ ೧೫ ॥

ತಾರತಮ್ಯಾರೋಹಣವ ಬರೆ-
ದಾರು ಪಠಿಸುವರವರ ಲಕ್ಷ್ಮೀ-
ನಾರಸಿಂಹ ಸಮಸ್ತದೇವಗಣಾಂತರಾತ್ಮಕನು।
ಪೂರಯಿಸುವ ಮನೋರಥಂಗಳ
ಕಾರುಣಿಕ ಕೈವಲ್ಯದಾಯಕ
ದೂರಗೈವ ಸಮಸ್ತದುರಿತವ ವಿಗತಶೋಕಸುಖ ॥ ೧೬ ॥

ಪ್ರಣತಕಾಮದನಂಘ್ರಿಸಂದರು-
ಶನ ಅಪೇಕ್ಷೆಗಳುಳ್ಳವಗೆ ನಿ-
ಚ್ಚಣಿಕೆಯೆನಿಪುದು ಜಡಮೊದಲು ಬ್ರಹ್ಮಾಂತತರತಮವು।
ಮನವಚನದಿಂ ಸ್ಮರಿಸುವರ ಭವ-
ವನಧಿ ಶೋಷಿಸಿ ಪೋಗುವುದು ಕಾ-
ರಣವೆನಿಸುವುದು ಜ್ಞಾನಭಕ್ತಿವಿರಕ್ತಿಸಂಪದಕೆ ॥ ೧೭ ॥

ಅನಲನೊಳು ಹೋಮಿಸುವ ಹರಿ ಚಂ-
ದನವೆ ಮೊದಲಾದದರ ಸೂವಾ-
ಸನೆಯು ಪ್ರತ್‌ಪ್ರತ್ಯೇಕ ತೋರ್ವದು ಎಲ್ಲ ಕಾಲದಲಿ।
ದನುಜ ಮಾನವ ದಿವಿಜರವರವ-
ರನುಚಿತೋಚಿತಕರ್ಮ ವೃಜಿನಾ-
ರ್ದನನು ವ್ಯಕ್ತಿಯ ಮಾಳ್ಪ ತ್ರಿಗುಣಾತೀತ ವಿಖ್ಯಾತ ॥ ೧೮ ॥

ಭಕ್ತವತ್ಸಲ ಭಾಗ್ಯಪುರುಷ ವಿ-
ವಿಕ್ತ ವಿಶ್ವಾಧಾರ ಸರ್ವೋ-
ದ್ರಿಕ್ತ ದೋಷವಿದೂರ ದುರ್ಗಮ ದುರ್ವಿಭಾವ್ಯ ಸ್ವಹಿ।
ಶಕ್ತ ಶಾಶ್ವತ ಸಕಲವೇದೈ-
ಕೋಕ್ತ ಮಾನದ ಮಾನ್ಯ ಮಾಧವ
ಸೂಕ್ತ ಸೂಕ್ಷ್ಮ ಸ್ಥೂಲ ತ್ರಿಜಗನ್ನಾಥವಿಟ್ಠಲನು ॥ ೧೯ ॥

★★★★★

# ಹರಿಕಥಾಮೃತಸಾರ - ೫

## ಸಂಧಿ - ೨೬: ಅವರೋಹಣತಾರತಮ್ಯ ಸಂಧಿ

[ ರಾಗ: ಮುಖಾರಿ - ಅಟತಾಳ ]

ಶ್ರೀರಮಣನಿಜಭಕ್ತರೆನಿಸುವ
ವಾರಿಜಾಸನಮುಖ್ಯನಿರ್ಜರ
ತಾರತಮ್ಯವ ಪೇಳ್ವೆ ಸಂಕ್ಷೇಪದಲಿ ಗುರುಬಲದಿ ॥ ಸಂಧಿ ಸೂಚನೆ ॥

ಕೇಶವಗೆ ನಾರಾಯಣಿಗೆ ಕಮ-
ಲಾಸನ ಸಮೀರಣಗೆ ವಾಣಿಗೆ
ವೀಶಫಣಿಪಮಹೇಶರಿಗೆ ಷಣ್ಮಹಿಷಿಯರ ಪದಕೆ।
ಶೇಷರುದ್ರರ ಪತ್ನಿಯರಿಗೆ ಸು-
ವಾಸವ ಪ್ರದ್ಯುಮ್ನರಿಗೆ ಸಂ-
ತೋಷದಲಿ ವಂದಿಸುವೆ ಭಕ್ತಿ ಜ್ಞಾನ ಕೊಡಲೆಂದು ॥ ೧ ॥

ಪ್ರಾಣದೇವಗೆ ನಮಿಪೆ ಕಾಮನ
ಸೂನು ಮನು ಗುರು ದಕ್ಷ ಶಚಿ ರತಿ
ಮಾನಿನಿಯರಿಗೆ ಪ್ರವಹದೇವಗೆ ಸೂರ್ಯ ಸೋಮ ಯಮ।
ಮಾನವಿಗೆ ವರುಣನಿಗೆ ವೀಣಾ-
ಪಾಣಿ ನಾರದಮುನಿಗೆ ನಮಿಸುವೆ
ಜ್ಞಾನ ಭಕ್ತಿ ವಿರಕ್ತಿ ಮಾರ್ಗವ ತಿಳಿಸಲೆನಗೆಂದು ॥ ೨ ॥

ಅನಲ ಭೃಗು ದಾಕ್ಷಾಯಣಿಯರಿಗೆ
ಕನಕಗರ್ಭಜ ಸಪ್ತಋಷಿಗಳಿ-
ಗೆಣೆ ಎನಿಪ ವೈವಸ್ವತಸುಮನು ಗಾಧಿಸಂಭವಗೆ।
ದನುಜ ನಿರಋತಿ ತಾರ ಪ್ರಾವಹಿ
ವನಜಮಿತ್ರಗ್ರಾಶ್ವಿನಿ ಗಣಪ-
ಧನಪ ವಿಷ್ವಕ್ಸೇನರಿಗೆ ವಂದಿಸುವೆನನವರತ ॥ ೩ ॥

ಉಕ್ತದೇವರ್ಕಳನುಳಿದು ಎಂ-
ಭತ್ತಯಿದು ಜನರುಗಳು ಮನುಗಳು-
ಚಥ್ಯ ಚ್ಯಾವನ ಯಮಳರಿಗೆ ಕರ್ಮಜರೆನಿಸುತಿಪ್ಪ।

ಕಾರ್ತವೀರ್ಯಾರ್ಜುನರೆ ಪ್ರಮುಖ ಶ-
ತಸ್ಥರಿಗೆ ಪರ್ಜನ್ಯಗಂಗಾ-
ದಿತ್ಯ ಯಮ ಸೋಮಾನಿರುದ್ಧರ ಪತ್ನಿಯರ ಪದಕೆ ॥ ೪ ॥

ಹುತವಹಾರ್ಧಾಂಗಿನಿಗೆ ಚಂದ್ರಮ-
ಸುತಬುಧಗೆ ನಾಮಾತ್ಮಿಕೋಷಾ-
ಸತಿಗೆ ಛಾಯಾತ್ಮಜಶನೈಶ್ಚರಗಾನಮಿಪೆ ಸತತ।
ಪ್ರತಿದಿವಸದಲಿ ಬಿಡದೆ ಜೀವ-
ಪ್ರತತಿ ಮಾಡುವ ಕರ್ಮಗಳಿಗಧಿ-
ಪತಿ ಎನಿಪ ಪುಷ್ಕರನ ಪಾದಾಂಬುಜಗಳಿಗೆ ನಮಿಪೆ ॥ ೫ ॥

ಆನಮಿಪೆ ಆಜಾನಜರಿಗೆ ಕೃ-
ಶಾನುಸುತರಿಗೆ ಗೋವ್ರಜದೊಳಿಹ
ಮಾನಿನಿಯರಿಗೆ ಚಿರಪಿತರು ಶತನ್ಯೂನ ಶತಕೋಟಿ।
ಮೌನಿಜನರಿಗೆ ದೇವಮಾನವ-
ಗಾನಪ್ರೌಢರಿಗವನಿಪರಿಗೆ ರ-
ಮಾನಿವಾಸನ ದಾಸವರ್ಗಕೆ ನಮಿಪೆನನವರತ ॥ ೬ ॥

ಅನುಕ್ರಮಣಿಕಾತಾರತಮ್ಯವ
ಅನುದಿನದಿ ಸದ್ಭಕ್ತಿಪೂರ್ವಕ
ನೆನೆವರಿಗೆ ಧರ್ಮಾರ್ಥಕಾಮಾದಿಗಳು ಫಲಿಸುವವು।
ವನಜಸಂಭವಮುಖ್ಯರವಯವ-
ರೆನಿಸುವ ಜಗನ್ನಾಥವಿಠಲಗೆ
ವಿನಯದಿಂದಲಿ ನಮಿಸಿ ಕೊಂಡಾಡುತಿರು ಮರೆಯದಲೆ ॥ ೭ ॥

★★★★★

# ಹರಿಕಥಾಮೃತಸಾರ - ೬

## ಸಂಧಿ - ೨೧: ಆವೇಶಾವತಾರ ಸಂಧಿ

[ ರಾಗ ಸಾವೇರಿ - ತ್ರಿಪುಟತಾಳ ]

ಹರಿ ಸಿರಿ ವಿರಿಂಚೀರಮುಖ ನಿ-
ರ್ಜರರ ಆವೇಶಾವತಾರ್ಗಳ
ಸ್ಮರಿಸು ಗುಣಗಣ ಸರ್ವಕಾಲದಿ ಭಕ್ತಿಪೂರ್ವಕದಿ ॥ ಸಂಧಿಸೂಚನೆ ॥

ಮೀನ ಕೂರ್ಮ ಕ್ರೋಡ ನರಹರಿ
ಮಾಣವಕ ಭೃಗುರಾಮ ದಶರಥ-
ಸೂನು ಯಾದವ ಬುದ್ಧ ಕಲ್ಕೀ ಕಪಿಲ ವೈಕುಂಠ ।
ಶ್ರೀನಿವಾಸನು ವ್ಯಾಸ ಋಷಭ ಹ-
ಯಾನನಾ ನಾರಾಯಣೀ ಹಂ-
ಸಾನಿರುದ್ಧ ತ್ರಿವಿಕ್ರಮ ಶ್ರೀಧರ ಹೃಷೀಕೇಶ ॥ ೧ ॥

ಹರಿಯು ನಾರಾಯಣನು ಕೃಷ್ಣಾ-
ಸುರಕುಲಾಂತಕ ಸೂರ್ಯಸಪ್ರಭ
ಕರೆಸುವನು ನಿರ್ದುಷ್ಟಸುಖಪರಿಪೂರ್ಣ ತಾನೆಂದು ।
ಸರ್ವದೇವೋತ್ತಮನು ಸರ್ವಗ
ಪರಮಪುರುಷ ಪುರಾತನ ಜರಾ-
ಮರಣವರ್ಜಿತ ವಾಸುದೇವಾದ್ಯಮಿತರೂಪಾತ್ಮಾ ॥ ೨ ॥

ಈ ನಳಿನಭವಜನನಿ ಲಕ್ಷ್ಮೀ
ಜ್ಞಾನಬಲಭಕ್ತ್ಯಾದಿಗುಣಸಂ-
ಪೂರ್ಣಳೆನಿಪಳು ಸರ್ವಕಾಲದಿ ಹರಿಕೃಪಾಬಲದಿ ।
ಹೀನಳೆನಿಪಳನಂತಗುಣದಿ ಪು-
ರಾಣಪುರುಷಗೆ ಪ್ರಕೃತಿಗಿನ್ನು ಸ-
ಮಾನರೆನಿಸುವರಿಲ್ಲ ಮುಕ್ತಾಮುಕ್ತಸುರರೊಳಗೆ ॥ ೩ ॥

ಗುಣಗಳತ್ರಯಮಾನಿ ಶ್ರೀ ಕುಂ-
ಭಿಣಿ ಮಹಾದುರ್ಗಾಂಭ್ರಣೀ ರು-
ಗ್ಮಿಣಿಯು ಸತ್ಯಾ ಶಾಂತಿ ಕೃತಿ ಜಯ ಮಾಯ ಮಹಲಕುಮಿ ।
ಜನಕಜಾ ಕಮಲಾಲಯಾ ದ-
ಕ್ಷಿಣೆಯು ಪದ್ಮಾ ತ್ರೀಲೊಕೇಶ್ವರಿ
ಅಣುಮಹತ್ತಿನೊಳಿದ್ದು ಉಪಮಾರಹಿತಳೆನಿಸುವಳು ॥ ೪ ॥

ಘೋಟಕಾಸ್ಯನ ಮಡದಿಗಿಂದಲಿ
ಹಾಟಕೋದರಪವನರೀರ್ವರು
ಕೋಟಿಗುಣದಿಂದಧಮರೆನಿಪರು ಆವಕಾಲದಲಿ।
ಖೇಟಪತಿಶೇಷಾಮರೇಂದ್ರರ
ಪಾಟಿ ಮಾಡದೆ ಶ್ರೀಶನ ಕೃಪಾ-
ನೋಟದಿಂದಲಿ ಸರ್ವರೊಳು ವ್ಯಾಪಾರ ಮಾಡುವರು ॥ ೫ ॥

ಪುರುಷ ಬ್ರಹ್ಮ ವಿರಿಂಚಿಯು ಮಹಾನ್
ಮರುತ ಮುಖ್ಯಪ್ರಾಣ ಧೃತಿ ಸ್ಮೃತಿ
ಗುರುವರ ಮಹಾಧ್ಯಾತ ಬಲ ವಿಜ್ಞಾತ ವಿಖ್ಯಾತ।
ಗರಳಭುಗ್ಭವರೋಗಭೇಷಜ
ಸ್ವರ ವರಣ ವೇದಸ್ಥ ಜೀವೇ-
ಶ್ವರ ವಿಭೀಷಣ ವಿಶ್ವಚೇಷ್ಟಕ ವೀತಭಯ ಭೀಮ ॥ ೬ ॥

ಅನಿಲ ಸ್ಥಿತಿ ವೈರಾಗ್ಯನಿಧಿ ರೋ-
ಚನ ವಿಮುಕ್ತಿಗ ನಂದ ದಶಮತಿ
ಅನಿಮಿಷೇಶಾನಿದ್ರ ಶುಚಿ ಸತ್ವಾತ್ಮಕಶರೀರ।
ಅಣುಮಹದ್ರೂಪಾತ್ಮಕಾಮೃತ
ಹನುಮದಾದ್ಯವತಾರ ಪದ್ಮಾ-
ಸನಪದವಿಸಂಪ್ರಾಪ್ತ ಪರಿಸರ ಆಖಣಾಶ್ಮಸಮ ॥ ೭ ॥

ಮಾತರಿಶ್ವಬ್ರಹ್ಮರು ಜಗ-
ನ್ಮಾತೆಗಧಮಾಧೀನರೆನಿಪರು
ಶ್ರೀತರುಣಿವಲ್ಲಭನು ಈರ್ವರೊಳಾವಕಾಲದಲಿ।
ನೀತಭಕ್ತಿ ಜ್ಞಾನ ಬಲ ರೂ-
ಪಾತಿಶಯದಿಂದಿದ್ದು ಚೇತಾ-
ಚೇತನಗಳೊಳು ವ್ಯಾಪ್ತರೆನಿಸುವ ತತ್ತದಾಹ್ವಯದಿ ॥ ೮ ॥

ಸರಸವತಿ ವೇದಾತ್ಮಿಕಾ ಭುಜಿ
ನರಹರೀ ಗುರುಭಕ್ತಿ ಬ್ರಾಹ್ಮೀ
ಪರಮಸುಖಬಲಪೂರ್ಣೆ ಶ್ರದ್ಧಾ ಪ್ರೀತಿ ಗಾಯತ್ರೀ।
ಗರುಡಶೇಷರ ಜನನಿ ಶ್ರೀಸಂ-
ಕರುಷಣಜಯಾತನುಜೆ ವಾಣೀ
ಕರಣನೀಯಾಮಕೆ ಚತುರ್ದಶಭುವನಸನ್ಮಾನ್ಯೆ ॥ ೯ ॥

ಕಾಳಿ ದ್ರೌಪದಿ ಕಾಶಿಜಾ ಪಾಂ-
ಚಾಲಿ ಶಿವಕನ್ಯೇಂದ್ರಸೇನಾ
ಕಾಲಮಾನೀ ಚಂದ್ರ ದ್ಯುಸಭಾ ನಾಮ ಭಾರತಿಗೆ।
ಗಾಳಿಬ್ರಹ್ಮರ ಯುವತಿಯರು ಏ-
ಳೇಳು ಐವತ್ತೊಂದು ಗುಣದಿಂ
ಕೀಳರೆನಿಪರು ತಮ್ಮ ಪತಿಗಳಿಗಿಂದಲಾವಾಗ ॥ ೧೦ ॥

ಹರಿ ಸಮೀರಾವೇಶ ನರ ಶಂ-
ಕರುಷಣಾವೇಶಯುತಲಕ್ಷ್ಮಣ
ಪರಮಪುರುಷನ ಶುಕ್ಲಕೇಶಾವೇಶ ಬಲರಾಮ।
ಹರ ಸದಾಶಿವ ತಪ ಅಹಂಕೃತು
ಮರುತಯುಕ್ತ ಶುಕೋರ್ಧ್ವಪಟ ತ-
ತ್ಪುರುಷ ಜೈಗೀಷೌರ್ವ ದ್ರೌಣೀ ವ್ಯಾಧ ದುರ್ವಾಸ ॥ ೧೧ ॥

ಗರುಡ ಶೇಷ ಶಶಾಂಕದಳಶೇ-
ಖರರು ತಮ್ಮೊಳು ಸಮರು ಭಾರತಿ-
ಸರಸಿಜಾಸನ ಪತ್ನಿಗಧಮರು ನೂರುಗುಣದಿಂದ।
ಹರಿಮಡದಿ ಜಾಂಬವತಿಯೊಳು ಶ್ರೀ-
ತರುಣಿ ಆವೇಶವಿಹದೆಂದಿಗು
ಕೊರತೆಯೆನಿಪರು ಗರುಡ ಶೇಷರಿಗೈವರೈದುಗುಣ ॥ ೧೨ ॥

ನೀಲ ಭದ್ರಾ ಮಿತ್ರವಿಂದಾ
ಮೇಲೆನಿಪ ಕಾಳಿಂದಿ ಲಕ್ಷಣ
ಬಾಲೆಯರಿಗಿಂದಧಮ ವಾರುಣಿ ಸೌಪರಣಿ ಗಿರಿಜಾ।
ಶ್ರೀಲಕುಮಿಯುತ ರೇವತೀ ಶ್ರೀ
ಮೂಲರೂಪದಿ ಪೇಯಳೆನಿಪಳು
ಶೈಲಜಾದ್ಯರು ದಶಗುಣಾಧಮ ತಮ್ಮ ಪತಿಗಳಿಗೆ ॥ ೧೩ ॥

ನರಹರೀರಾವೇಶಸಂಯುತ-
ನರ ಪುರಂದರ ಗಾಧಿ ಕುಶ ಮಂ-
ದರದ್ಯುಮ್ನ ವಿಕುಕ್ಷಿ ವಾಲೀ ಇಂದ್ರನವತಾರ।
ಭರತ ಬ್ರಹ್ಮಾವಿಷ್ಟಸಾಂಬ ಸು-
ದರುಶನ ಪ್ರದ್ಯುಮ್ನ ಸನಕಾ-
ದ್ಯರೊಳಗಿಪ್ಪ ಸನತ್ಕುಮಾರನು ಷಣ್ಮುಖನು ಕಾಮ ॥ ೧೪ ॥

ಈರಯಿದುಗುಣ ಕಡಿಮೆ ಪಾರ್ವತಿ
ವಾರುಣೀಯರಿಗಿಂದ್ರಕಾಮ ಶ-
ರೀರಮಾನಿ ಪ್ರಾಣ ದಶಗುಣ ಅವರ ಶಕ್ರನಿಗೆ।
ಮಾರಜಾ ರತಿ ದಕ್ಷ ಗುರು ವೃ-
ತ್ರಾರಿಜಾಯಾ ಶಚಿ ಸ್ವಯಂಭುವ-
ರಾರು ಜನ ಸಮ ಪ್ರಾಣಗವರರು ಹತ್ತುಗುಣದಿಂದ ॥ ೧೫ ॥

ಕಾಮಪುತ್ರನಿರುದ್ಧ ಸೀತಾ-
ರಾಮನಾನುಜ ಶತ್ರುಹನ ಬಲ-
ರಾಮನಾನುಜ ಪೌತ್ರ ಅನಿರುದ್ಧನೊಳಗನಿರುದ್ಧ।
ಕಾಮಭಾರ್ಯಾ ರುಗ್ಮವತಿ ಸ-
ನ್ನಾಮ ಲಕ್ಷಣಳೆನಿಸುವಳು ಪೌ-
ಲೋಮಿ ಚಿತ್ರಾಂಗದೆಯು ತಾರಾ ಎರಡು ಪೆಸರುಗಳು ॥ ೧೬ ॥

ತಾರನಾಮಕ ತ್ರೇತೆಯೊಳು ಸೀ-
ತಾರಮಣನಾರಾಧಿಸಿದನು ಸ-
ಮೀರಯುಕ್ತೋದ್ಧವನು ಕೃಷ್ಣಗೆ ಪ್ರೀಯನೆನಿಸಿದನು।
ವಾರಿಜಾಸನ ಯುಕ್ತ ದ್ರೋಣನು
ಮೂರು ಇಳೆಯೊಳು ಬೃಹಸಪತಿಗವ-
ತಾರವೆಂಬರು ಮಾಹಭಾರತತಾತ್ಪರಿಯದೊಳಗೆ ॥ ೧೭ ॥

ಮನುಮುಖಾದ್ಯರಿಗಿಂದ ಪ್ರವಹಾ
ಗುಣಗಳದ್ವಯ ನೀಚನೆನಿಸುವ
ಇನಶಶಾಂಕರು ಧರ್ಮ ಮಾನವಿ ಎರಡು ಗುಣದಿಂದ।
ಕನಿಯರೆನಿಪರು ಪ್ರವಹಗಿಂದಲಿ
ದಿನಪ ಶಶಿ ಯಮಧರ್ಮ ರೂಪಗ-
ಳನುದಿನದಿ ಚಿಂತಿಪ್ಪುದು ಸಂತರು ಸರ್ವಕಾಲದಲಿ ॥ ೧೮ ॥

ಮರುತನಾವೇಶಯುತ ಧರ್ಮಜ
ಕರಡಿ ವಿದುರನು ಸತ್ಯಜಿತು ಈ-
ರೆರಡು ಧರ್ಮನ ರೂಪ ಬ್ರಹ್ಮಾವಿಷ್ಟ ಸುಗ್ರೀವ।
ಹರಿಯರೂಪಾವಿಷ್ಟ ಕರ್ಣನು
ತರಣಿಗೆರಡವತಾರ ಚಂದ್ರಮ
ಸುರಪನಾವೇಶಯುತ ಅಂಗದನೆನಿಸಿಕೊಳುತಿಪ್ಪ ॥ ೧೯ ॥

ತರಣಿಗಿಂದಲಿ ಪಾದಪಾದರೆ
ವರುಣ ನೀಚ ಮಹಾಭಿಷಕು ದ-
ರ್ದುರ ಸುಷೇಣನು ಶಂತನುವು ನಾಲ್ವರು ವರುಣರೂಪ।
ಸುರಮುನೀ ನಾರದನು ಕಿಂಚಿತ್
ಕೊರತೆ ವರುಣಗೆ ಅಗ್ನಿ ಭೃಗು ಅಜ-
ಗೊರಳಪತ್ನಿ ಪ್ರಸೂತಿ ಮೂವರು ನಾರದನಿಗಧಮ ॥ ೨೦ ॥

ನೀಲ ಧೃಷ್ಟದ್ಯುಮ್ನ ಲವ ಈ
ಲೇಲಿಹಾನನ ರೂಪಗಳು ಭೃಗು
ಕಾಲಿಲೊದ್ದದರಿಂದ ಹರಿಯಾ ವ್ಯಾಧನೆನಿಸಿದನು।
ಏಳು ಋಷಿಗಳಿಗುತ್ತಮರು ಮುನಿ-
ಮೌಳಿ ನಾರದಗಧಮ ಮೂವರು
ಗಾಳಿಯುತ ಪ್ರಹ್ಲಾದ ಬಾಹ್ಲಿಕರಾಯನೆನಿಸಿದನು ॥ ೨೧ ॥

ಜನಪಕರ್ಮಜರೊಳಗೆ ನಾರದ
ಮುನಿಯನುಗ್ರಹಬಲದಿ ಪ್ರಹ್ಲಾ-
ದನಳ ಭೃಗುಮುನಿ ದಕ್ಷಪತ್ನಿಗೆ ಸಮನೆನಿಸಿಕೊಂಬ।
ಮನುವಿವಸ್ವಾನ್ ಗಾಧಿಜೇರ್ವರು
ಅನಲಗಿಂದಲಿ ಕಿಂಚಿತಾಧಮ-
ಎಣೆ ಎನಿಸುವರು ಸಪ್ತಋಷಿಗಳಿಗೆಲ್ಲ ಕಾಲದಲಿ ॥ ೨೨ ॥

ಕಮಲಸಂಭವಭವರೆನಿಪ ಸಂ-
ಯಮಿಮರೀಚೀ ಅತ್ರಿ ಅಂಗಿರ
ಸುಮತಿ ಪುಲಹಾ ಕ್ರತು ವಸಿಷ್ಠ ಪುಲಸ್ಯಮುನಿ ಸ್ವಾಹಾ-।
ರಮಣಗಧಮರು ಮಿತ್ರನಾಮಕ
ದ್ಯುಮಣಿ ರಾಹೂಯುಕ್ತ ಭೀಷ್ಮಕ
ಯಮಳರೂಪನು ತಾರನಾಮಕನೆನಿಪ ತ್ರೇತೆಯೊಳು ॥ ೨೩ ॥

ನಿಋತಿಗೆರಡವತಾರ ದುರ್ಮುಖ
ಹರಯುತ ಘಟೋತ್ಕಚನು ಪ್ರಾವಹಿ
ಗುರುಮಡದಿ ತಾರಾಸಮರು ಪರ್ಜನ್ಯಗುತ್ತಮರು।
ಕರಿಗೊರಳ ಸಂಯುಕ್ತ ಭಗದ-
ತ್ತರಸು ಕತ್ಥನ ಧನಪರೂಪಗ-
ಳೆರಡು ವಿಘ್ನಪ ಚಾರುದೇಷ್ಣನು ಅಶ್ವಿನಿಗಳು ಸಮ ॥ ೨೪ ॥

ದ್ರೋಣ ಧ್ರುವ ದೋಷಾರ್ಕ ಅಗ್ನೀ
ಪ್ರಾಣ ದ್ಯು ವಿಭಾವಸುಗಳೆಂಟು ಕೃ-
ಶಾನುಗಣದಿ ದ್ಯುನಾಮವಸು ಭೀಷ್ಮಾರ್ಯ ಬ್ರಹ್ಮಯುತ।
ದ್ರೋಣನಾಮಕ ನಂದಗೋಪ ಪ್ರ-
ಧಾನ ಅಗ್ನಿಯನುಳಿದು ಏಳು ಸ-
ಮಾನರೆನಿಪರು ತಮ್ಮೊಳಗೆ ಜ್ಞಾನಾದಿಗುಣದಿಂದ ॥ ೨೫ ॥

ಭೀಮ ರೈವತ ಓಜಜೈಕಪ-
ದಾ ಮಹಾ ಬಹುರೂಪಕನು ಭವ
ವಾಮ ಉಗ್ರ ವೃಷಾಕಪಿ ಅಹಿರ್ಬುಧ್ನಿ ಎನುತಿಪ್ಪ।
ಈ ಮಹಾತ್ಮರ ಮಧ್ಯದೊಳಗೆ ಉ-
ಮಾಮನೋಹರ ಉತ್ತಮನು ದಶ-
ನಾಮಕರು ಸಮರೆನಿಸಿಕೊಂಬರು ತಮ್ಮೊಳೆಂದೆಂದು ॥ ೨೬ ॥

ಭೂರ್ಯಜೈಕಪದಾಹ್ವಹಿರ್ಬು-
ಧ್ನೀರಯಿದು ರುದ್ರಗಣಸಂಯುತ
ಭೂರಿಶ್ರವನೆಂದೆನಿಪ ಶಲ ವಿರುಪಾಕ್ಷನಾಮಕನು।
ಸೂರಿ ಕೃಪ ವಿಷ್ಕಂಭ ಸಹದೇ-
ವಾ ರಣಾಗ್ರಣಿ ಸೋಮದತ್ತನು
ತಾ ರಚಿಸಿದ ದ್ವಿರೂಪ ಧರೆಯೊಳು ಪತ್ರತಾಪಕನು ॥ ೨೭ ॥

ದೇವಶಕ್ರ ಉರುಕ್ರಮಾ ಮಿ-
ತ್ರಾವರುಣ ಪರ್ಜನ್ಯ ಭಗ ಪೂ-
ಷಾ ವಿವಸ್ವಾನ್ ಸವಿತೃ ಧಾತಾ ಅರ್ಯಮ ತ್ವಷ್ಟಾ।
ದೇವಕೀಸುತನಲ್ಲಿ ಸವಿತೃ ವಿ-
ಭಾವಸೂಸುತ ಭಾನು ಎನಿಸುವ
ಜಾವನಪ ವೀರಸೇನನು ತ್ವಷ್ಟ್ರನಾಮಕನು ॥ ೨೮ ॥

ಎರಡಧಿಕ ದಶಸೂರ್ಯರೊಳು ಮೂ-
ರೆರಡು ಜನರುತ್ತಮ ವಿವಸ್ವಾನ್
ವರುಣ ಶಕ್ರ ಉರುಕ್ರಮಾ ಪರ್ಜನ್ಯ ಮಿತ್ರಾಖ್ಯ।
ಮರುತನಾವೇಶಯುತ ಪಾಂಡುವು
ಪಾರವಹನೆಂದೆನಿಸುವನು ಕೇ-
ಸರಿಮೃಗಪ ಸಂಪಾತಿ ಶ್ವೇತ ತ್ರಯರು ಮರುದಂಶ ॥ ೨೯ ॥

ಪ್ರತಿಭವಾತನು ಚೇಕಿತನು ವಿ-
ಪೃಥುವೆನಿಸುವನು ಸೌಮ್ಯಮಾರುತ
ವಿತತ ಸರ್ವೋತ್ತುಂಗ ಗಜನಾಮಕರು ಪ್ರಾಣಾಂಶ।
ದ್ವಿತಿಯಪಾನ ಗವಾಕ್ಷ ಗವಯನು
ತೃತಿಯ ವ್ಯಾನ ಉದಾನ ವೃಷಪ-
ರ್ವತುಳ ಶರ್ವತ್ರಾತ ಗಂಧಸುಮಾದನರು ಸಮನ ॥ ೩೦ ॥

ಐವರೊಳಗೀ ಕುಂತಿಭೋಜನು
ಆವಿ ನಾಮಕ ನಾಗ ಕೃಕಲನು
ದೇವದತ್ತಧನಂಜಯರು ಅವತಾರವರ್ಜಿತರು।
ಆವಹೋದ್ವಹ ವಿವಹ ಸಂವಹ
ಪ್ರಾವಹೀಪತಿ ಮರುತ ಪ್ರವಹನಿ-
ಗಾವಕಾಲಕು ಕಿಂಚಿದಧಮರು ಮರುತಗಣರೆಲ್ಲ ॥ ೩೧ ॥

ಪ್ರಾಣಪಾನ ವ್ಯಾನುದಾನ ಸ-
ಮಾನರೈವರನುಳಿದು ಮರುತರು
ಊನರೆನಿಪರು ಹತ್ತು ವಿಶ್ವೇದೇವರಿವರಿಂದ।
ಸೂನುಗಳು ಎನಿಸುವರು ಐವರು
ಮಾನಿನೀ ದ್ರೌಪದಿಗೆ ಕೆಲವರು
ಕ್ಷೋಣಿಯೊಳು ಕೈಕೇಯರೆನಿಪರು ಎಲ್ಲ ಕಾಲದಲಿ ॥ ೩೨ ॥

ಪ್ರತಿವಿಂಧ್ಯ ಶ್ರುತಸೋಮ ಶ್ರುತಕೀ-
ರುತಿ ಶತಾನಿಕ ಶ್ರುತಕರಮ ದ್ರೌ-
ಪದಿ ಕುವರರಿವರೊಳಗೆ ಅಭಿತಾಮ್ರ ಪ್ರಮುಖಚಿತ್ರ-।
ರಥನು ಗೋಪ ಕಿಶೋರ ಬಲರೆಂ-
ಬತುಳರೈಗಂಧರ್ವರಿಂದಲಿ
ಯುತರು ಧರ್ಮ ವೃಕೋದರಾದಿಜರೆಂದು ಕರೆಸುವರು ॥ ೩೩ ॥

ವಿವಿದಮೈಂದರು ನಕುಲಸಹದೇ-
ವ ವಿಭು ತ್ರಿಶಿಖಾಶ್ವಿನಿಗಳಿವರೊಳು
ದಿವಿಪನಾವೇಶವಿಹದೆಂದಿಗು ದ್ಯಾವಪೃಥ್ವಿಋಭು।
ಪವನಸುತ ವಿಷ್ವಕ್ಸೇನ ಉಮಾ-
ಕುವರ ವಿಘ್ನಪ ಧನಪ ಮೊದಲಾ-
ದವರು ಮಿತ್ರಗೆ ಕಿಂಚಿತಾಧಮರೆನಿಸಿಕೊಳುತಿಹರು ॥ ೩೪ ॥

ಪಾವಕಾಗ್ನಿಕುಮಾರನೆನಿಸುವ
ಚ್ಯಾವನ ಉಚತ್ಥ್ಯಮುನಿ ಚಾಕ್ಷುಷ
ರೈವತ ಸ್ವಾರೋಚಿಷೋತ್ತಮ ಬ್ರಹ್ಮರುದ್ರೇಂದ್ರ।
ದೇವಧರ್ಮನು ದಕ್ಷನಾಮಕ
ಸಾವರಣಿ ಶಶಿಬಿಂದು ಪೃಥು ಪ್ರೀ-
ಯವ್ರತನು ಮಾಂಧಾತ ಗಯನು ಕಕುತ್ಸ್ಥ ದೌಷ್ಯಂತಿ ॥ ೩೫ ॥

ಭರತ ಋಷಭಜ ಹರಿಣಿಜ ದ್ವಿಜ
ಭರತ ಮೊದಲಾದಖಿಳರಾಯರೊ-
ಳಿರುತಿಹುದು ಶ್ರೀವಿಷ್ಣು ಪ್ರಾಣಾವೇಶ ಪ್ರತಿದಿನದಿ।
ವರ ದಿವಸ್ಪತಿ ಶಂಭುರದ್ಭುತ
ಕರೆಸುವನು ಬಲಿ ವಿದ್ಯುತ ದ್ಯುತಶುಚಿ
ನೆರೆ ಖಲೂ ಕೃತಧಾಮ ಮೊದಲಾದಷ್ಟಗಂಧರ್ವ ॥ ೩೬ ॥

ಅರಸೆನಿಪ ಕರ್ಮಜರು ವೈಶ್ವಾ-
ನರಗಧಮ ಶತಗುಣದಿ ವಿಘನೇ-
ಶ್ವರಗೆ ಕಿಂಚಿದ್ಗುಣ ಕಡಿಮೆ ಬಲಿಮುಖ್ಯಪಾವಕರು।
ಶರಭ ಪರ್ಜನ್ಯಾಖ್ಯ ಮೇಘಪ
ತರಣಿಭಾರ್ಯಾ ಸಂಜ್ಞ ಶಾರ್ವರಿ-
ಕರನ ಪತ್ನಿಯು ರೋಹಿಣೀ ಶ್ಯಾಮಲೆಯು ದೇವಕಿಯು ॥ ೩೭ ॥

ಅರಸಿ ಎನಿಪಳು ಧರ್ಮರಾಜಗೆ
ವರುಣಭಾರ್ಯೋಷಾದಿ ಷಟ್ಕರು
ಕೊರತೆ ಎನಿಪರು ಪಾವಕಾದ್ಯರಿಗೆರಡು ಗುಣದಿಂದ।
ಆರುಜನಗಿಂದಧಮ ಸ್ವಾಹಾ
ಕರೆಸುವಳುಷಾದೇವಿ ವೈಶ್ವಾ-
ನರನ ಮಡದಿಗೆ ದಶಗುಣಾವರಳಶ್ವಿನೀಭಾರ್ಯಾ ॥ ೩೮ ॥

ಸುದರುಶನ ಶಕ್ರಾದಿಸುರಯುತ
ಬುಧನು ತಾ ಅಭಿಮನ್ಯುವೆನಿಸುವ
ಬುಧನಿಗಿಂದಶ್ವಿನಿಭಾರ್ಯಾಶಲ್ಯಮಾಗಧರ।
ಉದರಜೋಷಾದೇವಿಗಿಂದಲಿ
ಅಧಮನೆನಿಪ ಶನೈಶ್ಚರನು ಶನಿ-
ಗಧಮ ಪುಷ್ಕರ ಕರ್ಮಪನು ಎನಿಸುವನು ಬುಧರಿಂದ ॥ ೩೯ ॥

ಉದ್ವಹಾ ಮರುತಾನ್ವಿತ ವಿರಾ-
ಧ ದ್ವಿತಿಯ ಸಂಜಯನು ತುಂಬುರು
ವಿದ್ವದುತ್ತಮ ಜನಮೆಜಯ ತ್ವಷ್ಟ್ರುಯುತ ಚಿತ್ರರಥ।
ಸದ್ವಿನುತ ದಮಘೋಷಕ ಕಬಂ-
ಧದ್ವಯರು ಗಂಧರ್ವ ದನು ಮನು
ಪದ್ಮಸಂಭವಯುತಾಕ್ರೂರ ಕಿಶೋರನೆನಿಸುವನು ॥ ೪೦ ॥

ವಾಯುಯುತ ಧೃತರಾಷ್ಟ್ರ ದಿವಿಜರ
ಗಾಯಕನು ಧೃತರಾಷ್ಟ್ರ ನಕ್ರನು
ರಾಯ ದ್ರುಪದನು ಆವಹವಿಶಿಷ್ಟ ಹುಹುಗಂಧರ್ವ।
ನಾಯಕ ವಿರಾಡ್ವಿವಹಯುತ ಹಹ
ಜ್ಞೇಯ ವಿದ್ಯಾಧರನೆ ಅಜಗರ
ತಾ ಎನಿಸುವನು ಉಗ್ರಸೇನನೆ ಉಗ್ರಸೇನಾಖ್ಯ ॥ ೪೧ ॥

ಬಿಸಜಸಂಭವಯುಕ್ತ ವಿಶ್ವಾ-
ವಸು ಯುಧಾಮನ್ಯುತ್ತಮೌಜಸ
ಬಿಸಜಮಿತ್ರಾರ್ಯಮಯುತ ಪರಾವಸು ಎನಿಸುತಿಪ್ಪ।
ಅಸಮಮಿತ್ರಾನ್ವಿತನು ಸತಜಿತು
ವಸುಧೆಯೊಳು ಚಿತ್ರಸೇನಮೃತಾಂ-
ಧಸರ ಗಾಯಕರೆಂದು ಕರೆಸುವರಾವಕಾಲದಲಿ ॥ ೪೨ ॥

ಉಳಿದ ಗಂಧರ್ವರುಗಳೆಲ್ಲರು
ಬಲಿ ಮೊದಲು ಗೋಪಾಲರೆನಿಪರು
ಇಳೆಯೊಳಗೆ ಸೈರಂಧ್ರಿ ಪಿಂಗಳ ಅಪ್ಸರಸ್ತ್ರಿಯಳು।
ತಿಲಉತಮಿ ಪೂರ್ವದಲಿ ನಕುಲನ
ಲಲನೆ ಪಾರ್ವತಿಯೆನಿಸುವಳು ಗೋ-
ಕುಲದ ಗೋಪಿಯರೆಲ್ಲ ಶಬರೀಮುಖ್ಯರಪ್ಸರರು ॥ ೪೩ ॥

ಕೃಷ್ಣವರ್ತ್ಮನ ಸುತರೊಳಗೆ ಶತ-
ದ್ವಷ್ಟಸಾವಿರ ಸ್ತ್ರೀಯರಲಿ ಪ್ರ-
ವಿಷ್ಟಳಾಗಿ ರಮಾಂಬ ತತ್ತನ್ನಾಮರೂಪದಲಿ।
ಕೃಷ್ಣಮಹಿಷಿಯರೊಳಗೆ ಇಪ್ಪಳು
ತ್ವಷ್ಟ್ರುಪುತ್ರಿ ಕಶೇರು ಇವರೊಳು
ಶ್ರೇಷ್ಠಳೆನಿಪಳು ಉಳಿದ ಋಷಿಗಣ ಗೋಪಿಕಾಸಮರು ॥ ೪೪ ॥

ಸೂನುಗಳು ಎನಿಸುವರು ದೇವ ಕೃ-
ಶಾನುವಿಗೆ ಕ್ರಥ ಶುಂಧು ಶುಚಿ ಪವ-
ಮಾನ ಕೈಶಿಕರೈದು ತುಂಬುರು ಉರ್ವಶೀಶತರು ।
ಮೇನಕೀ ಋಷಿರಾಯರುಗಳಾ-
ಜಾನಸುರರಿಗೆ ಸಮರೆನಿಪರು ಸು-
ರಾಣಕರನಾಖ್ಯಾತದಿವಿಜರ ಜನಕರೆನಿಸುವರು ॥ ೪೫ ॥

ಪಾವಕನಿಗಿಂದಧಮರೆನಿಸುವ
ದೇವಕುಲಜಾನಾಖ್ಯಸುರಗಣ
ಕೋವಿದರು ನಾನಾಸುವಿದ್ಯದಿ ಸ್ವೋತ್ತಮರ ನಿತ್ಯ ।
ಸೇವಿಪರು ಸದ್ಭಕ್ತಿಪೂರ್ವಕ
ಸ್ವಾವರರಿಗುಪದೇಶಿಸುವರು ನಿ-
ರಾವಲಂಬನ ವಿಮಲಗುಣಗಳ ಪ್ರತಿದಿವಸದಲ್ಲಿ ॥ ೪೬ ॥

ಸುರರೊಳಗೆ ವರಣಾಶ್ರಮಗಳೆಂ-
ಬೆರಡು ಧರ್ಮಗಳಿಲ್ಲ ತಮ್ಮೊಳು
ನಿರುಪಮರು ಎಂದೆನಿಸಿಕೊಂಬರು ತಾರತಮ್ಯದಲಿ ।
ಗುರುವಿಕೆಯು ಶಿಷ್ಯತ್ವ ಋಷಿಗಳೊ-
ಳಿರುತಿಹದು ಆಜಾನಸುರರಿಗೆ
ಚಿರಪಿತೃ ಶತಾಧಮರೆನಿಸುವರು ಏಳುಜನರುಳಿದು ॥ ೪೭ ॥

ಚಿರಪಿತೃಗಳಿಂದಧಮ ಗಂಧ-
ರ್ವರುಗಳೆನಿಪರು ದೇವನಾಮಕ
ಕೊರತೆಯೆನಿಸುವ ಚಕ್ರವರ್ತಿಗಳಿಂದ ಗಂಧರ್ವ ।
ನರರೊಳುತ್ತಮರೆನಿಸುವರು ಹ-
ನ್ನೆರಡು ಎಂಭತ್ತೆಂಟು ಗುಣದಲಿ
ಹಿರಿಯರೆನಿಪರು ಕ್ರಮದಿ ದೇವಾವೇಶಬಲದಿಂದ ॥ ೪೮ ॥

ದೇವತೆಗಳಿಂ ಪ್ರೇಷ್ಯರೆನಿಪರು
ದೇವಗಂಧರ್ವರುಗಳವರಿಂ-
ದಾವಕಾಲಕು ಶಿಕ್ಷಿತರು ನರನಾಮಗಂಧರ್ವ ।
ಕೇವಲತಿಸದ್ಭಕ್ತಿ ಪೂರ್ವಕ
ಯಾವದಿಂದ್ರಿಯಗಳ ನಿಯಾಮಕ
ಶ್ರೀವರನೆ ಎಂದರಿತು ಭಜಿಪರು ಮಾನುಷೋತ್ತಮರು ॥ ೪೯ ॥

ಬಾದರಾಯಣ ಭಾಗವತ ಮೊದ-
ಲಾದಶಾಸ್ತ್ರಗಳಲ್ಲಿ ಬಹುವಿಧ
ದ್ವಾದಶ ದಶ ಸುಪಂಚವಿಂಶತಿ ಶತ ಸಹಸ್ರಯುತ।
ಭೇದಗಳ ಪೇಳಿದನು ಸ್ವೋತ್ತಮ
ಆದಿತೇಯಾವೇಶಬಲದಿ ವಿ-
ರೋಧ ಚಿಂತಿಸಬಾರದಿದು ಸಾಧುಜನಸಮ್ಮತವು ॥ ೫೦ ॥

ಇವರು ಮುಕ್ತೀಯೋಗ್ಯರೆಂಬರು
ಶ್ರವಣಮನನಾದಿಗಳ ಪರಮೋ-
ತ್ಸವದಿ ಮಾಡುತ ಕೇಳಿ ನಲಿವುತ ಧರ್ಮಕಾಮಾರ್ಥ।
ತ್ರಿವಿಧಫಲಗಳಪೇಕ್ಷಿಸದೆ ಶ್ರೀ-
ಪವನಮುಖ ದೇವಾಂತರಾತ್ಮಕ
ಪ್ರವರತಮ ಶಿಷ್ಟೇಷ್ಟದಾಯಕನೆಂದು ಸ್ಮರಿಸುವರು ॥ ೫೧ ॥

ನಿತ್ಯಸಂಸಾರಿಗಳು ಗುಣದೋ-
ಷಾತ್ಮಕರು ಬ್ರಹ್ಮಾದಿಜೀವರ
ಭೃತ್ಯರೆಂಬರು ರಾಜನೋಪಾದಿಯಲಿ ಹರಿಯೆಂಬ।
ಕೃತ್ತಿವಾಸ ಬ್ರಹ್ಮ ಶ್ರೀ ವಿ-
ಷ್ಣುತ್ರಯರು ಸಮದುಃಖಸುಖ ಉ-
ತ್ಪತ್ತಿ ಮೃತಿ ಭಯ ಪೇಳುವರು ಅವತಾರಗಳಿಗೆ ಸದಾ ॥ ೫೨ ॥

ತಾರತಮ್ಯಜ್ಞಾನವಿಲ್ಲದೆ
ಸೂರಿಗಳ ನಿಂದಿಸುತ ನಿತ್ಯದಿ
ತೋರುತಿಪ್ಪರು ಸುಜನರೋಪಾದಿಯಲಿ ನರರೊಳಗೆ।
ಕ್ರೂರಕರ್ಮಾಸಕ್ತರಾಗಿ ಶ-
ರೀರಪೋಷಣೆಗೋಸುಗದಿ ಸಂ-
ಚಾರಮಾಳ್ಪರು ಅನ್ಯದೇವತೆ ನೀಚರಾಲಯದಿ ॥ ೫೩ ॥

ದಶಪ್ರಮತಿಮತಾಬ್ಧಿಯೊಳು ಸುಮ-
ನಸರೆನಿಪ ರತ್ನಗಳನವಲೋ-
ಕಿಸಿ ತೆಗೆದು ಪ್ರಾಕೃತ ಸುಭಾಷಾ ತಂತುಗಳ ರಚಿಸಿ।
ಅಸುಪತಿ ಶ್ರೀರಮಣಗೆ ಸಮ-
ರ್ಪಿಸಿದೆ ಸಜ್ಜನರಿದನು ಸಂತೋ-
ಷಿಸಲಿ ದೋಷಗಳೆಣಿಸದಲೆ ಕಾರುಣ್ಯದಲಿ ನಿತ್ಯ ॥ ೫೪ ॥

ನಿರುಪಮ ಶ್ರೀವಿಷ್ಣು ಲಕ್ಷ್ಮೀ-
ಸರಸಿಜೋದ್ಭವ ವಾಯು ವಾಣೀ-
ಗರುಡ ಷಣ್ಮಹಿಷಿಯರು ಪಾರ್ವತಿ ಶಕ್ರ ಸ್ಮರ ಪ್ರಾಣ।
ಗುರು ಬೃಹಸ್ಪತಿ ಪ್ರವಹ ಸೂರ್ಯನು
ವರುಣ ನಾರದ ವಹ್ನಿ ಸಪ್ತಾಂ-
ಗಿರರು ಮಿತ್ರ ಗಣೇಶ ಪೃಥು ಗಂಗಾ ಸ್ವಹಾ ಬುಧನು ॥ ೫೫ ॥

ತರಣಿತನಯ ಶನೈಶ್ಚರನು ಪು-
ಷ್ಕರ ಅಜಾನಜ ಚಿರಪಿತರು ಗಂ-
ಧರ್ವರೀರ್ವರು ದೇವ ಮಾನುಷ ಚಕ್ರವರ್ತಿಗಳು।
ನರರೊಳುತ್ತಮ ಮಧ್ಯಮಾಧಮ
ಕರೆಸುವರು ಮಧ್ಯೋತ್ತಮರು ಈ-
ರೆರಡು ಜನ ಕೈವಲ್ಯಮಾರ್ಗಸ್ಥರೆಂದಾನಮಿಪೆ ॥ ೫೬ ॥

ಸಾರಭಕ್ತಿಜ್ಞಾನದಿ ಬೃಹ-
ತ್ತಾರತಮ್ಯವನರಿತು ಪಠಿಸುವ
ಸೂರಿಗಳಿಗನುದಿನದಿ ಪುರುಷಾರ್ಥಗಳ ಪೂರೈಸಿ।
ಕಾರುಣಿಕ ಮರುತಾಂತರಾತ್ಮಕ
ಮಾರಮಣ ಜಗನಾಥವಿಟ್ಠಲ
ತೋರಿಕೊಂಬನು ಹೃತ್ಕಮಲದೊಳು ಯೋಗ್ಯತೆಗಳರಿತು ॥ ೫೭ ॥

*****

# ಹರಿಕಥಾಮೃತಸಾರ - ೭

## ಸಂಧಿ - ೨೭: ದೇವತಾನುಕ್ರಮಣಿಕಾ ಸಂಧಿ

[ ರಾಗ: ಸಾವೇರಿ - ರೂಪಕತಾಳ ]

ಮಾನುಷೋತ್ತಮವಿಡಿದು ಸಂಕ-
ರ್ಷಣನ ಪರಿಯಂತರದಿ ಪೇಳಿದ
ಅನುಕ್ರಮಣಿಕಾ ಪದ್ಯವನು ಕೇಳುವುದು ಸಜ್ಜನರು ॥ ಸಂಧಿಸೂಚನೆ ॥

ಶ್ರೀಮದಾಚಾರ್ಯರ ಮತಾನುಗ
ಧೀಮತಾಂವರರಂಘ್ರಿಕಮಲಕೆ
ಸೋಮಪಾನಾರ್ಹರಿಗೆ ತಾತ್ವಿಕದೇವತಾಗಣಕೆ।
ಹೈಮವತಿ ಷಣ್ಮಹಿಷಿಯರ ಪದ
ವ್ಯೋಮಕೇಶಗೆ ವಾಣಿವಾಯೂ
ತಾಮರಸಭವ ಲಕ್ಷ್ಮಿನಾರಾಯಣರಿಗಾನಮಿಪೆ ॥ ೧ ॥

ಶ್ರೀಮತಾಂವರ ಶ್ರೀಪತೇ ಸ-
ತ್ಕಾಮಿತಪ್ರದ ಸೌಮ್ಯ ತ್ರಿಕಕು-
ದ್ಧಾಮ ತ್ರಿಚತುಷ್ಪಾದ ಪಾವನಚರಿತ ಚಾರ್ವಂಗ।
ಗೋಮತಿಪ್ರಿಯ ಗೌಣ ಗುರುತಮ
ಸಾಮಗಾಯನಲೋಲ ಸರ್ವ-
ಸ್ವಾಮಿ ಮಮ ಕುಲದೈವ ಸಂತೈಸುವುದು ಸಜ್ಜನರ ॥ ೨ ॥

ರಾಮ ರಾಕ್ಷಸಕುಲಭಯಂಕರ
ಸಾಮಜೇಂದ್ರಪ್ರಿಯ ಮನೋವಾ-
ಚಾಮಗೋಚರ ಚಿತ್ಸುಖಪ್ರದ ಚಾರುತರಚರಿತ।
ಭೂಮ ಭೂ ಸ್ವರ್ಗಾಪವರ್ಗದ
ಕಾಮಧೇನು ಸುಕಲ್ಪತರು ಚಿಂ-
ತಾಮಣೀ ಎಂದೆನಿಪ ನಿಜಭಕ್ತರಿಗೆ ಸರ್ವತ್ರ ॥ ೩ ॥

ಸ್ವರ್ಣವರ್ಣ ಸ್ವತಂತ್ರ ಸರ್ವಗ
ಕರ್ಣಹೀನಸುಶಯ್ಯ ಶಾಶ್ವತ
ವರ್ಣಚತುರಾಶ್ರಮವಿವರ್ಜಿತ ಚಾರುತರ ಸ್ವರತ।

ಅರ್ಣಸಂಪ್ರತಿಪಾದ್ಯ ವಾಯುಸು-
ಪರ್ಣವರವಹ ಅಪ್ರತಿಮ ವಟ-
ಪರ್ಣಶಯನಾಶ್ಚರ್ಯತಮ ಸಚ್ಚರಿತ ಗುಣಭರಿತ ॥ ೪ ॥

ಅಗಣಿತಸುಗುಣಧಾಮ ನಿಶ್ಚಲ
ಸ್ವಗತಭೇದವಿಶೂನ್ಯ ಶಾಶ್ವತ
ಜಗದ ಜೀವಾತ್ಯಂತಭಿನ್ನಾಪನ್ನಪರಿಪಾಲ।
ತ್ರಿಗುಣವರ್ಜಿತ ತ್ರಿಭುವನೇಶ್ವರ
ಹಗಲಿರುಳು ಸ್ಮರಿಸುತಲಿಹರ ಬಿ-
ಟ್ಟಗಲ ಶ್ರೀಜಗನ್ನಾಥವಿಠ್ಠಲ ವಿಶ್ವವ್ಯಾಪಕನು ॥ ೫ ॥

★★★★★

# ಹರಿಕಥಾಮೃತಸಾರ - ೮

## ಸಂಧಿ - ೩೦: ದೈತ್ಯತಾರತಮ್ಯ ಸಂಧಿ

[ ರಾಗ: ಕಾಪಿ - ರೂಪಕತಾಳ ]

ಶ್ರೀಶ ಮುಕ್ತಾಮುಕ್ತಸುರವರ
ವಾಸುದೇವಗೆ ಭಕ್ತಿಯಲಿ ಕಮ-
ಲಾಸನನು ಪೇಳಿದನು ದೈತ್ಯಸ್ವಭಾವಗುಣಗಳನು ॥ ಸಂಧಿಸೂಚನೆ ॥

ಎನಗೆ ನಿನ್ನಲಿ ಭಕ್ತಿಜ್ಞಾನಗ-
ಳೆನಿತಿಹವು ಪ್ರಾಣನಲಿ ತಿಳಿಯದೆ
ಹನುಮದಾದ್ಯವತಾರಗಳ ಭೇದಗಳ ಪೇಳುವವ।
ದನುಜ ಘೋರಾಂಧತಮಸಿಗ್ಯೋ-
ಗ್ಯನು ನ ಸಂಶಯ ನಿನ್ನ ಬೈವರ
ಕೊನೆಯ ನಾಲಿಗೆ ಪಿಡಿದು ಭೇದಿಪೆನೆಂದನಬ್ಜಭವ ॥ ೧ ॥

ಜ್ಞಾನ ಬಲ ಸುಖ ಪೂರ್ಣ ವ್ಯಾಪ್ತಗೆ
ಹೀನಗುಣನೆಂಬವನು ಈಶ್ವರ
ತಾನೆ ಎಂಬವ ಸಚ್ಚಿದಾನಂದಾತ್ಮಗುತ್ಪತ್ತಿ।
ಶ್ರೀನಿತಂಬಿನಿಗೀಶಗೆ ವಿಯೋ-
ಗಾನುಚಿಂತನೆ ಭೇದಭೇದವಿ-
ಹೀನದೇಹಗೆ ಶಸ್ತ್ರಗಳ ಭಯ ಪೇಳುವವ ದೈತ್ಯ ॥ ೨ ॥

ಲೇಶ ಭಯ ಶೋಕಾದಿ ಶೂನ್ಯಗೆ
ಕ್ಲೇಶಗಳ ಪೇಳುವವ ರಾಮ-
ವ್ಯಾಸ ರೂಪಂಗಳಿಗೆ ಋಷಿ ವಿಪ್ರತ್ವ ಪೇಳುವವ।
ದಾಶರಥಿ ಕೃಷ್ಣಾದಿರೂಪಕೆ
ಕೇಶಖಂಡನ ಪೇಳ್ವ ಮಕ್ಕಳಿ-
ಗೋಸುಗ ಶಿವಾರ್ಚನೆಯ ಮಾಡಿದನೆಂಬವನೆ ದೈತ್ಯ ॥ ೩ ॥

ಪಾಪಪರಿಹಾರಾರ್ಥ ರಾಮ ಉ-
ಮಾಪತಿಯ ನಿರ್ಮಿಸಿದ ಭಗವ-
ದ್ರೂಪರೂಪಕೆ ಭೇದಚಿಂತನೆ ಮಾಳ್ಪ ಮಾನವನು।

ಆಪಗಳು ಸತ್ತೀರ್ಥ ಗುರು ಮಾ-
ತಾಪಿತೃ ಪ್ರಭು ಪ್ರತಿಮೆ ಭೂತದ-
ಯಾಪರರು ಕಂಡವರೆ ದೇವರು ಎಂಬವನೆ ದೈತ್ಯ ॥ ४ ॥

ಸುಂದರ ಸ್ವಯಂವ್ಯಕ್ತವು ಚಿದಾ-
ನಂದರೂಪಗಳೆಂಬವನು ನರ-
ನಿಂದ ನಿರ್ಮಿತ ಈಶ್ವರಗೆ ಅಭಿನಮಿಸುತಿಹ ನರನು।
ಕಂದುಗೊರಳ ದಿವಾಕರನು ಹರಿ-
ಯೊಂದೆ ಸೂರ್ಯ ಸುರೋತ್ತಮ ಜಗ-
ದ್ವಂದ್ಯನೆಂಬವ ವಿಷ್ಣುದೂಷಣೆ ಮಾಡಿದವ ದೈತ್ಯ ॥ ೫ ॥

ನೇಮದಿಂದಶ್ವತ್ಥ ತುಳಸೀ-
ಸೋಮಧರನಲಿ ವಿಮಲಸಾಲಿ-
ಗ್ರಾಮಗಳನಿಟ್ಟಭಿನಮಿಪ ನರ ಮುಕ್ತಿಯೋಗ್ಯ ಸದಾ।
ಭೂಮಿಯೊಳು ಧರ್ಮಾರ್ಥಮುಕ್ತಿಸು-
ಕಾಮಪೇಕ್ಷೆಗಳಿಂದ ಸಾಲ-
ಗ್ರಾಮಗಳ ವ್ಯತಿರಿಕ್ತ ವಂದಿಸೆ ದುಃಖವೈದುವನು ॥ ೬ ॥

ವಿತತಮಹಿಮನ ಬಿಟ್ಟು ಸುರರಿಗೆ
ಪೃಥಕು ವಂದನೆ ಮಾಳ್ಪ ಮಾನವ
ದಿತಿಜನೇ ಸರಿ ಹರಿಯು ತಾ ಸಂಸ್ಥಿತನೆನಿಸನಲ್ಲಿ।
ಚತುರಮುಖ ಮೊದಲಾದಖಿಳ ದೇ-
ವತೆಗಳೊಳಗಿಹನೆಂದು ಲಕ್ಷ್ಮೀ-
ಪತಿಗೆ ವಂದಿಸೆ ಒಂದರೆಕ್ಷಣ ಬಿಟ್ಟಗಲನವರ ॥ ೭ ॥

ಶೈವ ಶೂದ್ರ ಕರಾರ್ಚಿತ ಮಹಾ-
ದೇವ ವಾಯು ಹರಿಪ್ರತಿಮೆ ವೃಂ-
ದಾವನದಿ ಮಾಸದ್ವಯದೊಳಿಹ ತುಳಸಿ ಅಪ್ರಸವ-।
ಗೋ ವಿವಾಹವಿವರ್ಜಿತಾಶ್ವ-
ತ್ಥಾವಿಟಪಿಗಳ ಭಕ್ತಿಪೂರ್ವಕ
ಸೇವಿಸುವ ನರ ದೈತ್ಯ ಶಾಶ್ವತದುಃಖವೈದುವನು ॥ ೮ ॥

ಕಮಲಸಂಭವಮುಖ್ಯ ಮನುಜೋ-
ತ್ತಮರ ಪರಿಯಂತರದಿ ಮುಕ್ತರು
ಸಮಶತಾಯುಷ್ಯುಳ್ಳವನು ಕಲಿ ಬ್ರಹ್ಮನೋಪಾದಿ।

ಕ್ರಮದಿ ನೀಚರು ದೈತ್ಯರು ನರಾ-
ಧಮರ ಎಡಿದು ಕುಲಕ್ಷ್ಮಿ ಕಲಿ ಅನು-
ಪಮರೆನಿಸುವರಸುರರೊಳು ದ್ವೇಷಾದಿಗುಣದಿಂದ ॥ ೯ ॥

ವನಜಸಂಭವನಬ್ದಶತ ಒ-
ಬ್ಬನೆ ಮಹಾಕಲಿಶಬ್ದವಾಚ್ಯನು
ದಿನದಿನಗಳಲಿ ಬೀಳ್ವರಂಧಂತಮದಿ ಕಲಿಮಾರ್ಗ।
ದನುಜರೆಲ್ಲ ಪ್ರತೀಕ್ಷಿಸುತ ಬ್ರ-
ಹ್ಮನ ಶತಾಬ್ದಾಂತದಲಿ ಲಿಂಗವು
ಅನಿಲನ ಗದಾಪ್ರಹರದಿಂದಲಿ ಭಂಗವೈದುವುದು ॥ ೧೦ ॥

ಮಾರುತನ ಗದೆಯಿಂದ ಲಿಂಗ ಶ-
ರೀರ ಪೋದಾನಂತರ ತಮೋ-
ದ್ವಾರವೈದಿ ಸ್ವರೂಪದುಃಖಗಳನುಭವಿಸುತಿಹರು।
ವೈರ ಹರಿಭಕ್ತರಲಿ ಹರಿಯಲಿ
ತಾರತಮ್ಯದಲಿರುತಿಹುದು ಸಂ-
ಸಾರದಲ್ಲಿ ತಮಸ್ಸಿನಲಿ ಅತ್ಯಧಿಕ ಕಲಿಯಲ್ಲಿ ॥ ೧೧ ॥

ಜ್ಞಾನವೆಂಬುದೆ ಮಿಥ್ಯ ಅಸಮೀ-
ಚೀನದುಃಖತರಂಗವೆ ಸಮೀ-
ಚೀನಬುದ್ಧಿ ನಿರಂತರದಿ ಕಲಿಗಿಹುದು ದೈತ್ಯರೊಳು।
ಹೀನಳೆನಿಪಳು ಶತಗುಣದಿ ಕಲಿ-
ಮಾನಿನಿಗೆ ಶತ ವಿಪ್ರಚಿತ್ತಿಗೆ
ಊನ ಶತಗುಣ ಕಾಲನೇಮಿಯೆ ಕಂಸನೆನಿಸಿದನು ॥ ೧೨ ॥

ಕಾಲನೇಮಿಗೆ ಪಂಚಗುಣದಿಂ
ಕೀಳು ಮಧುಕೈಟಭರು ಜನ್ಮವ
ತಾಳಿ ಇಳೆಯೊಳು ಹಂಸಡಿಬಿಕಾಹ್ವಯದಿ ಕರೆಸಿದರು।
ಐಳನಾಮಕ ವಿಪ್ರಚಿತ್ತಿ ಸ-
ಮಾಳು ಎನಿಪ ಹಿರಣ್ಯಕಶ್ಯಪು
ಶೂಲಪಾಣಿಯ ಭಕ್ತ ನರಕಗೆ ಶತಗುಣಾಧಮನು ॥ ೧೩ ॥

ಗುಣಗಳತ್ರಯ ನೀಚನೆನಿಸುವ
ಕನಕಕಶಿಪುಗೆ ಹಾಟಕಾಂಬಕ
ಗೆಣೆಯೆನಿಪ ಮಣಿಮಂತಗಿಂತಲಿ ಕಿಂಚಿದೂನ ಬಕ।

ದನುಜವರ ತಾರಕನು ವಿಂಶತಿ-
ಗುಣದಿ ನೀಚನು ಲೋಕಕಂಟಕ-
ನೆನಿಪ ಶಂಬರ ತಾರಕಾಸುರಗಧಮ ಷಡ್ಗುಣದಿ ॥ ೧೪ ॥

ಸರಿಯೆನಿಸುವನು ಸಾಲ್ವನಿಗೆ ಸಂ-
ಕರನಿಗಧಮನು ದಶಗುಣದಿ ಶಂ-
ಬರಗೆ ಷಡ್ಗುಣ ನೀಚನೆನಿಪ ಹಿಡಿಂಬಿಕಾ ಬಾಣಾ- ।
ಸುರನು ಕೀಚಕ ದ್ವಾಪರನು ನಾ-
ಲ್ವರು ಸಮರು ದ್ವಾಪರನೆ ಶಕುನಿಯು
ಕರೆಸಿದನು ಕೌರವಗೆ ಸೋದರಮಾವನಹುದೆಂದು ॥ ೧೫ ॥

ನಮುಚಿ ಇಲ್ವಲ ಪಾಕನಾಮಕ
ಸಮರು ಬಾಣಾದ್ಯರಿಗೆ ದಶಗುಣ
ನಮುಚಿ ನೀಚನು ಮೂರುಗುಣದಿಂದಧಮ ವಾತಾಪಿ ।
ಕುಮತಿಧೇನುಕ ನೂರುಗುಣದಿಂ-
ದಮರರಿಪುವಾತಾಪಿಗಧಮನು
ವಮನಧೇನುಕನಿಂತಲರ್ಧಗುಣಾಧಮನು ಕೇಶಿ ॥ ೧೬ ॥

ಮತ್ತೆ ಕೇಶೀನಾಮಕ ತೃಣಾ-
ವರ್ತಸಮ ಲವಣಾಸುರನು ಒಂ-
ದ್ಹತ್ತು ನೀಚಾರಿಷ್ಟನಾಮಕ ಪಂಚಗುಣದಿಂದ ।
ದೈತ್ಯಸತ್ತಮ ಹಂಸಡಿಬಿಕ ಪ್ರ-
ಮತ್ತ ವೇನನು ಪೌಂಡ್ರಕನು ಒಂ-
ಭತ್ತುಗುಣದಿಂದಧಮ ಮೂವರು ಲವಣನಾಮಕಗೆ ॥ ೧೭ ॥

ಈಶನೇ ನಾನೆಂಬ ಖಳ ದು-
ಶ್ಶಾಸನಾ ವೃಷಸೇನ ದೈತ್ಯಾ-
ಗ್ರೇಸರ ಜರಾಸಂಧಸಮ ಪಾಪಿಗಳೊಳತ್ಯಧಿಕ ।
ಕಂಸ ಕೂಪ ವಿಕರ್ಣ ಸರಿ ರು-
ಗ್ಮೀ ಶತಾಧಮ ರುಗ್ಮಿಗಿಂತ ಮ-
ಹಾಸುರನು ಶತಧನ್ವಕಿರ್ಮೀರರು ಶತಾಧಮರು ॥ ೧೮ ॥

ಮದಿರಪಾನೀ ದೈತ್ಯಗಣದೊಳ-
ಗಧಮರೆನಿಪರು ಕಾಲಕೇಯರು
ಅಧಿಕರಿಗೆ ಸಮರಹರು ದೇವಾವೇಶಬಲದಿಂದ ।

ವದನ ಪಾಣೀ ಪಾದ ಶ್ರೋತ್ರಿಯ
ಗುದ ಉಪಸ್ಥ ಘ್ರಾಣ ತ್ವಗ್ರಸ-
ಕಧಿಪದೈತ್ಯರು ನೀಚರೆನಿಪರು ಕಾಲಕೇಯರಿಗೆ ॥ ೧೯ ॥

ಜ್ಞಾನಕರ್ಮೇಂದ್ರಿಯಗಳಿಗೆ ಅಭಿ-
ಮಾನಿ ಕಲ್ಯಾದ್ಯಖಿಳ ದೈತ್ಯರು
ಹೀನಕರ್ಮವ ಮಾಡಿ ಮಾಡಿಸುತಿಹರು ಸರ್ವರೊಳು।
ವಾಣಿ ಭಾರತಿ ಕಮಲಭವ ಪವ-
ಮಾನರಿವರಚ್ಛಿನ್ನಭಕ್ತರು
ಪ್ರಾಣ ಅಸುರಾವೇಶರಹಿತರು ಆಖಣಾಶ್ಮಸಮ ॥ ೨೦ ॥

ಹುತವಹಾಕ್ಷಾದ್ಯಮರರೆಲ್ಲರು
ಯುತರು ಕಲ್ಯಾವೇಶ ವಿಧಿ ಮಾ-
ರುತ ಸರಸ್ವತಿ ಭಾರತೀರವತಾರದೊಳಗಿಲ್ಲ।
ಕೃತಪುಟಾಂಜಲಿಯಿಂದ ತನ್ನಯ
ಪಿತನ ಸಂಮುಖದಲ್ಲಿ ನಿಂದಾ-
ನತಿಸಿ ಬಿನ್ನೈಸಿದನು ಎನ್ನೊಳು ಕೃಪೆಯ ಮಾಡೆಂದು ॥ ೨೧ ॥

ದ್ವೇಷಿದೈತ್ಯರ ತಾರತಮ್ಯವ
ದೂಷಣೆಯು ಭೂಷಣಗಳೆನ್ನದೆ
ದೋಷವೆಂಬವ ದ್ವೇಷಿ ನಿಶ್ಚಯ ಇವರ ನೋಡಲ್ಕೆ।
ಕ್ಲೇಶಗಳನೈದುವನು ಬಹುವಿಧ
ಸಂಶಯವ ಬಡ ಸಲ್ಲ ವೇದ-
ವ್ಯಾಸ ಗರುಡಪುರಾಣದಲಿ ಪೇಳಿದನು ಋಷಿಗಳಿಗೆ ॥ ೨೨ ॥

ಜಾಲಿ ನೆಗ್ಗಿಲು ಕ್ಷುದ್ರಶಿಲೆ ಬರಿ-
ಗಾಲ ಪುರುಷನ ಬಾಧಿಪವು ಚ-
ಮ್ಮಾಳಿಗೆಯ ಮೆಟ್ಟದವಗುಂಟೇ ಕಂಟಕಗಳ ಭಯ।
ಚೇಳು ಸರ್ಪವ ಕೊಂದ ವಾರ್ತೆಯ
ಕೇಳಿ ಮೋದಿಪಗಿಲ್ಲವಘ ಯಮ-
ನಾಳುಗಳ ಭಯವಿಲ್ಲ ದೈತ್ಯರ ನಿಂದಿಸುವ ನರಗೆ ॥ ೨೩ ॥

ಪುಣ್ಯಕರ್ಮವ ಪುಷ್ಕರಾದಿ ಹಿ-
ರಣ್ಯಗರ್ಭಾಂತರ್ಗತ ಬ್ರ-
ಹ್ಮಣ್ಯದೇವನಿಗರ್ಪಿಸುತಲಿರು ಪಾಪಕರ್ಮಗಳ।

ಜನ್ಯದುಃಖವ ಕಲಿಮುಖಾದ್ಯರಿ-
ಗುಣ್ಣಲೀವನು ಸಕಲಲೋಕಶ-
ರಣ್ಯಶಾಶ್ವತ ಮಿಶ್ರಜನರಿಗೆ ಮಿಶ್ರಫಲವೀವ ॥ ೨೪ ॥

ತ್ರಿವಿಧಗುಣಗಳ ಮಾನಿ ಶ್ರೀಭಾ-
ರ್ಗವಿರಮಣ ಗುಣಗುಣಗಳೊಳಗವ-
ರವರ ಯೋಗ್ಯತೆ ಕರ್ಮಗಳನನುಸರಿಸಿ ಕರ್ಮಫಲ ।
ಸ್ವವಶರಾದಮರಾಸುರರ ಗಣ-
ಕವಧಿಯಿಲ್ಲದೆ ಕೊಡುವ ದೇವ-
ಪ್ರವರ ವರ ಜಗನಾಥವಿಟ್ಠಲ ಪರಮಕರುಣಾಳು ॥ ೨೫ ॥

*****

ಪರಿಶಿಷ್ಟ - ೧೬

# ಹರಿಕಥಾಮೃತಸಾರ - ೯

## ಸಂಧಿ - ೨೪ (ಕಲ್ಪಸಾಧನ ಸಂಧಿ)

[ ರಾಗ: ಆರಭಿ - ಆದಿತಾಳ ]

ಏಕವಿಂಶತಿಮತಪ್ರವರ್ತಕ
ಕಾಕುಮಾಯ್ಗಳ ಕುಹಕಯುಕ್ತಿ ನಿ-
ರಾಕರಿಸಿ ಸರ್ವೋತ್ತಮನು ಹರಿಯೆಂದು ಸ್ಥಾಪಿಸಿದ।
ಶ್ರೀಕಳತ್ರನ ಸದನ ದ್ವಿಜಪ ಪಿ-
ನಾಕಿಸನ್ನುತಮಹಿಮ ಪರಮ ಕೃ-
ಪಾಕಟಾಕ್ಷದಿ ನೋಡು ಮಧ್ವಾಚಾರ್ಯ ಗುರುವರ್ಯ ॥ ೧ ॥

ವೇಧಮೊದಲಾಗಿಪ್ಪಮಲಮೋ-
ಕ್ಷಾಧಿಕಾರಿಗಳಾದ ಜೀವರ
ಸಾಧನಗಳಪರೋಕ್ಷನಂತರ ಲಿಂಗಭಂಗವನು।
ಸಾಧುಗಳು ಚಿತ್ತೈಪುದೆನ್ನಪ-
ರಾಧಗಳ ನೋಡದಲೆ ಚಕ್ರಗ-
ದಾಧರನು ಪೇಳಿಸಿದ ತೆರದಂದದಲಿ ಪೇಳುವೆನು ॥ ೨ ॥

ತೃಣ ಕ್ರಿಮಿ ದ್ವಿಜ ಪಶು ನರೋತ್ತಮ
ಜನಪ ನರಗಂಧರ್ವಗಣರಿವ-
ರೆನಿಪರಂಶವಿಹೀನ ಕರ್ಮಸುಯೋಗಿಗಳು ಎಂದು।
ತನುಪ್ರತೀಕದಿ ಬಿಂಬನ ಉಪಾ-
ಸನವ ಗೈವುತ ಇಂದ್ರಿಯಜ ಕ-
ರ್ಮನವರತ ಹರಿಗರ್ಪಿಸುತ ನಿರ್ಮಮರು ಎನಿಸುವರು ॥ ೩ ॥

ಏಳುವಿಧ ಜೀವಗಣ ಬಹಳ ಸು-
ರಾಳಿ ಸಂಖ್ಯಾನೇಮವುಳ್ಳದು
ತಾಳಿ ನರದೇಹವನು ಬ್ರಾಹ್ಮಣಕುಲದಲುದ್ಭವಿಸಿ।
ಸ್ಥೂಲಕರ್ಮವ ತೊರೆದು ಗುರುಗಳು
ಪೇಳಿದರ್ಥವ ತಿಳಿದು ತತ್ತ-
ತ್ಕಾಲಧರ್ಮ ಸಮರ್ಪಿಸುವವರು ಕರ್ಮಯೋಗಿಗಳು ॥ ೪ ॥

ಹೀನಕರ್ಮಗಳಿಂದ ಬಹುವಿಧ-
ಯೋನಿಯಲಿ ಸಂಚರಿಸಿ ಪ್ರಾಂತಕೆ
ಮಾನುಷತ್ವವನೈದಿ ಸರ್ವೋತ್ತಮನು ಹರಿಯೆಂಬ।
ಜ್ಞಾನಭಕ್ತಿಗಳಿಂದ ವೇದೋ-
ಕ್ತಾನುಸಾರ ಸಹಸ್ರಜನ್ಮಾ-
ನ್ಯೂನಕರ್ಮವ ಮಾಡಿ ಹರಿಗರ್ಪಿಸಿದ ನಂತರದಿ ॥ ೫ ॥

ಹತ್ತುಜನ್ಮಗಳಲ್ಲಿ ಹರಿ ಸ-
ರ್ವೋತ್ತಮ ಸುರಾಸುರಗಣಾರ್ಚಿತ
ಚಿತ್ರಕರ್ಮ ವಿಶೋಕನಂತಾನಂತರೂಪಾತ್ಮ।
ಸತ್ಯಸತ್ಸಂಕಲ್ಪ ಜಗದು-
ತ್ಪತ್ತಿಸ್ಥಿತಿಲಯಕಾರಣ ಜರಾ-
ಮೃತ್ಯುವರ್ಜಿತನೆಂದುಪಾಸನೆಗೈದ ತರುವಾಯ ॥ ೬ ॥

ಮೂರುಜನ್ಮಗಳಲ್ಲಿ ದೇಹಾ-
ಗಾರ ಪಶು ಧನ ಪತ್ನಿ ಮಿತ್ರ ಕು-
ಮಾರ ಮಾತಾ ಪಿತೃಗಳಲ್ಲಿಹ ಸ್ನೇಹದಿಂದಧಿಕ।
ಮಾರಮಣನಲಿ ಬಿಡದೆ ಮಾಡುವ
ಸೂರಿಗಳು ಈ ಉಕ್ತಜನ್ಮವ
ಮೀರಿ ಪರಮಾತ್ಮನ ಸ್ವದೇಹದಿ ನೋಡಿ ಸುಖಿಸುವರು ॥ ೭ ॥

ದೇವಗಾಯಕಜಾನುಚಿರಪಿತೃ-
ದೇವರೆಲ್ಲರು ಜ್ಞಾನಯೋಗಿಗ-
ಳಾವಕಾಲಕು ಪುಷ್ಕರ ಶನೈಶ್ಚರ ಉಷಾ ಸ್ವಾಹಾ- ।
ದೇವಿ ಬುಧ ಸನಕಾದಿಗಳು ಮೇ-
ಘಾವಳಿಪಪರ್ಜನ್ಯ ಸಾಂಶರು
ಈ ಉಭಯಗಣದೊಳಗಿವರು ವಿಜ್ಞಾನಯೋಗಿಗಳು ॥ ೮ ॥

ಭರತಖಂಡದಿ ನೂರುಜನ್ಮವ
ಧರಿಸಿ ನಿಷ್ಕಾಮಕ ಸುಕರ್ಮಾ-
ಚರಿಸಿದಾನಂತರದಿ ದಶಸಾಹಸ್ರಜನ್ಮದಲಿ।
ಉರುತರಜ್ಞಾನವನು ಪಡೆದೈ-
ದೆರಡುದಶದೇಹದಲಿ ಭಕುತಿಯ
ನಿರವಧಿಕನಲಿ ಮಾಡಿ ಕಾಂಬರು ಬಿಂಬರೂಪವನು ॥ ೯ ॥

ಸಾಧನಾತ್ಪೂರ್ವದಲಿ ಇವರಿಗ-
ನಾದಿಕಾಲಪರೋಕ್ಷವಿಲ್ಲ ನಿ-
ಷೇಧಕರ್ಮಗಳಿಲ್ಲ ನರಕಪ್ರಾಪ್ತಿ ಮೊದಲಿಲ್ಲ।
ವೇದಶಾಸ್ತ್ರಗಳಲ್ಲಿ ಇಪ್ಪ ವಿ-
ರೋಧವಾಕ್ಯವ ಪರಿಹರಿಸಿ ಮಧು-
ಸೂದನನೆ ಸರ್ವೋತ್ತಮೋತ್ತಮನೆಂದು ಸುಖಿಸುವರು ॥ ೧೦ ॥

ಸತ್ಯಲೋಕಾಧಿಪನ ವಿಡಿದು ಶ-
ತಸ್ಥ ದೇವಗಣಾಂತ ಎಲ್ಲರು
ಭಕ್ತಿಯೋಗಿಗಳೆಂದು ಕರೆಸುವರಾವಕಾಲದಲಿ।
ಭಕ್ತಿಯೋಗ್ಯರ ಮಧ್ಯದಲಿ ಸ-
ದ್ಭಕ್ತಿ ವಿಜ್ಞಾನಾದಿಗುಣದಿಂ-
ದುತ್ತಮೋತ್ತಮ ಬ್ರಹ್ಮವಾಯೂ ವಾಣಿ ವಾಗ್ದೇವಿ ॥ ೧೧ ॥

ಋಜುಗಣಕೆ ಭಕ್ತ್ಯಾದಿಗುಣ ಸಾ-
ಹಜವೆನಿಸುವವು ಕ್ರಮದಿ ವೃದ್ಧ್ಯಾ-
ಬ್ಜಜಪದವಿಪರಿಯಂತ ಬಿಂಬೋಪಾಸನವು ಅಧಿಕ।
ವೃಜಿನವರ್ಜಿತರಿವರೊಳಗೆ ತ್ರಿಗು-
ಣಜವಿಕಾರಗಳಿಲ್ಲವೆಂದಿಗು
ದ್ವಿಜ ಫಣಿಪ ಮೃಡ ಶಕ್ರ ಮೊದಲಾದವರೊಳಿರುತಿಹವು ॥ ೧೨ ॥

ಸಾಧನಾತ್ಪೂರ್ವದಲಿ ಈ ಋ-
ಜ್ವಾದಿತಾತ್ವಿಕರೆನಿಪ ಸುರಗಣ-
ನಾದಿಸಾಮಾನ್ಯಾಪರೋಕ್ಷಿಗಳೆಂದು ಕರೆಸುವರು।
ಸಾಧನೋತ್ತರ ಸ್ವಸ್ವಬಿಂಬ ಉ-
ಪಾಧಿರಹಿತಾದಿತ್ಯನಂದದಿ
ಸಾದರದಿ ನೋಡುವರು ಅಧಿಕಾರಾನುಸಾರದಲಿ ॥ ೧೩ ॥

ಭಿನ್ನಭಕ್ತರು ಎನಿಸುತಿಹರು ಸು-
ಪರ್ಣ ಶೇಷಾದ್ಯಮರರೆಲ್ಲಾ-
ಚ್ಛಿನ್ನಭಕ್ತರು ನಾಲ್ವರೆನಿಪರು ಭಾರತೀಪ್ರಾಣ।
ಸೊನ್ನೊಡಲ ವಾಗ್ದೇವಿಯರು ಪಣೆ-
ಗಣ್ಣ ಮೊದಲಾದವರೊಳಗೆ ತ-
ತ್ತನ್ನಿಯಾಮಕರಾಗಿ ವ್ಯಾಪಾರವನೆ ಮಾಡುವರು ॥ ೧೪ ॥

ಹೀನಸತ್ಕರ್ಮಗಳೆರೆಡು ಪವ-
ಮಾನದೇವನು ಮಾಳ್ಪನಿದಕನು-
ಮಾನವಿಲ್ಲೆಂದೆನುತ ದೃಢಭಕ್ತಿಯಲಿ ಭಜಿಪರ್ಗೆ।
ಪ್ರಾಣಪತಿ ಸಂಪ್ರೀತನಾಗಿ ಕು-
ಯೋನಿಗಳ ಕೊಡ ಎಲ್ಲ ಕರ್ಮಗ-
ಳಾನೆ ಮಾಡುವೆನೆಂಬ ಮನುಜರ ನರಕವೈದಿಸುವ ॥ ೧೫ ॥

ದೇವ ಋಷಿ ಪಿತೃಪ ನರರೆನಿಸುವ
ಐವರೊಳು ನೆಲೆಸಿರ್ದು ಅವರ ಸ್ವ-
ಭಾವಕರ್ಮವ ಮಾಡಿ ಮಾಡಿಪ ಒಂದು ರೂಪದಲಿ।
ಭಾವಿಬ್ರಹ್ಮನು ಕೂರ್ಮರೂಪದಿ
ಈ ವಿರಿಂಚಾಂಡವನು ಬೆನ್ನಿಲಿ
ತಾ ವಹಿಸಿ ಲೋಕಗಳ ಪೊರೆವನು ದ್ವಿತಿಯರೂಪದಲಿ ॥ ೧೬ ॥

ಗುಪ್ತನಾಗಿದ್ದನಿಳದೇವ ದ್ವಿ-
ಸಪ್ತಲೋಕದ ಜೀವರೊಳಗೆ ತ್ರಿ-
ಸಪ್ತಸಾವಿರದಾರುನೂರು ಶ್ವಾಸಜಪಗಳನು।
ಸುಪ್ತಿಸ್ವಪ್ನದಿ ಜಾಗ್ರತಿಗಳಲಿ
ಆಪ್ತನಂದದಿ ಮಾಡಿ ಮಾಡಿಸಿ
ಕ್ಲೃಪ್ತಭೋಗಗಳೀವ ಪ್ರಾಂತಕೆ ತೃತಿಯರೂಪದಲಿ ॥ ೧೭ ॥

ಶುದ್ಧಸತ್ವಾತ್ಮಕ ಶರೀರದೊ-
ಳಿದ್ದ ಕಾಲಕು ಲಿಂಗದೇಹವು
ಬದ್ಧವಾಗದು ದಗ್ಧಪಟದೋಪಾದಿ ಇರುತಿಹುದು।
ಸಿದ್ಧಸಾಧನ ಸರ್ವರೊಳಗನ-
ವದ್ಯನೆನಿಸುವ ಗರುಡ ಶೇಷ ಕ-
ಪರ್ದಿಮೊದಲಾದಮರರೆಲ್ಲರು ದಾಸರೆನಿಸುವರು ॥ ೧೮ ॥

ಗಣದೊಳಗೆ ತಾನಿದ್ದು ಋಜು ಎಂ-
ದೆನಿಸಿಕೊಂಬನು ಕಲ್ಪಶತ ಸಾ-
ಧನವಗೈದಾನಂತರದಿ ತಾ ಕಲ್ಕಿ ಎನಿಸುವನು।
ದ್ವಿನವಶೀತಿ ಪ್ರಾಂತಭಾಗದಿ
ಅನಿಲ ಹನುಮದ್ಭೀಮರೂಪದಿ
ದನುಜರೆಲ್ಲರ ಸದೆದು ಮಧ್ವಾಚಾರ್ಯರೆನಿಸಿದನು ॥ ೧೯ ॥

ವಿಶ್ವವ್ಯಾಪಕಹರಿಗೆ ತಾ ಸಾ-
ದೃಶ್ಯರೂಪವ ಧರಿಸಿ ಬ್ರಹ್ಮ ಸ-
ರಸ್ವತೀ ಭಾರತಿಗಳಿಂದೊಡಗೂಡಿ ಪವಮಾನ।
ಶಾಶ್ವತಸುಭಕ್ತಿಯಲಿ ಸುಜ್ಞಾ-
ನಸ್ವರೂಪನ ರೂಪಗುಣಗಳ-
ನಶ್ವರವು ಎಂದೆನುತ ಪೊಗಳುವ ಶ್ರುತಿಗಳೊಳಗಿದ್ದು ॥ ೨೦ ॥

ಖೇಟ ಕುಕ್ಕುಟ ಜಲಟವೆಂಬ ತ್ರಿ-
ಕೋಟಿ ರೂಪವ ಧರಿಸಿ ಸತತ ನಿ-
ಶಾಟರನ ಸಂಹರಿಸಿ ಸಲಹುವ ಸರ್ವಸಜ್ಜನರ।
ಕೈಟಭಾರಿಯ ಪುರದ ಪ್ರಥಮ ಕ-
ವಾಟನೆನಿಸುವ ಗರುಡಶೇಷಲ-
ಲಾಟಲೋಚನಮುಖ್ಯಸುರರಿಗೆ ಆವಕಾಲದಲಿ ॥ ೨೧ ॥

ಈ ಋಜುಗಳೊಳಗೊಬ್ಬ ಸಾಧನ
ನೂರುಕಲ್ಪದಿ ಮಾಡಿ ಕರೆಸುವ
ಚಾರುತರಮಂಗಳ ಸುನಾಮದಿ ಕಲ್ಪಕಲ್ಪದಲಿ।
ಸೂರಿಗಳು ಸಂತುತಿಸಿ ವಂದಿಸೆ
ಘೋರದುರಿತಗಳಳಿದು ಪೋಪವು
ಮಾರಮಣ ಸಂಪ್ರೀತನಾಗುವ ಸರ್ವಕಾಲದಲಿ ॥ ೨೨ ॥

ಪಾಹಿ ಕಲ್ಕಿ ಸುತೇಜ ದಾಸನೆ
ಪಾಹಿ ಧರ್ಮಾಧರ್ಮಖಂಡನೆ
ಪಾಹಿ ವರ್ಚಸ್ವೀ ಋಷಣ ನಮೊ ಸಾಧು ಮಹಿಪತಿಯೆ।
ಪಾಹಿ ಸದ್ಧರ್ಮಜ್ಞ ಧರ್ಮಜ
ಪಾಹಿ ಸಂಪೂರ್ಣ ಶುಚಿವೈಕೃತ
ಪಾಹಿ ಅಂಜನ ಸರ್ಷಪನೆ ಖರ್ಪಟನೆ ಶ್ರದ್ಧಾಹ್ವ ॥ ೨೩ ॥

ಪಾಹಿ ಸಂಧ್ಯಾತ ವಿಜ್ಞಾನನೆ
ಪಾಹಿ ಮಹವಿಜ್ಞಾನ ಕೀರ್ತನ
ಪಾಹಿ ಸಂಕೀರ್ಣಾಖ್ಯ ಕತ್ಥನ ಪಾಹಿ ಬುದ್ಧ ಜಯ।
ಪಾಹಿ ಮಾಹತ್ತರ ಸುವೀರ್ಯನೆ
ಪಾಹಿ ಮಾಂ ಮೇಧಾವಿ ಜಯಜಯ
ಪಾಹಿ ಮಾಂ ರಂತಿಮ್ನ ಮನು ಮಾಂ ಪಾಹಿ ಮಾಂ ಪಾಹಿ ॥ ೨೪ ॥

ಪಾಹಿ ಮೋದ ಪ್ರಮೋದ ಸಂತತ
ಪಾಹಿ ಆನಂದ ಸಂತುಷ್ಟನೆ
ಪಾಹಿ ಮಾಂ ಚಾರ್ವಂಗ ಚಾರುಸುಬಾಹು ಚಾರುಪದ।
ಪಾಹಿ ಪಾಹಿ ಸುಲೋಚನನೆ ಮಾಂ
ಪಾಹಿ ಸಾರಸ್ವತ ಸುವೀರನೆ
ಪಾಹಿ ಪ್ರಾಜ್ಞನೆ ಕಪಿ ಅಲಂಪಟ ಪಾಹಿ ಸರ್ವಜ್ಞ ॥ ೨೫ ॥

ಪಾಹಿ ಮಾಂ ಸರ್ವಜಿತು ಮಿತ್ರನೆ
ಪಾಹಿ ಪಾಪವಿನಾಶಕನೆ ಮಾಂ
ಪಾಹಿ ಧರ್ಮವಿನೇತ ಶಾರದ ಓಜ ಸುತಪಸ್ವೀ।
ಪಾಹಿ ಮಾಂ ತೇಜಸ್ವಿ ನಮೊ ಮಾಂ
ಪಾಹಿ ದಾನಸುಶೀಲ ನಮೊ ಮಾಂ
ಪಾಹಿ ಯಜ್ಞ ಸುಕರ್ತ ಯಜ್ವೀ ಯಾಗವರ್ತಕನೆ ॥ ೨೬ ॥

ಪಾಹಿ ಪ್ರಾಣ ತ್ರಾಣ ಅಮರಿಷಿ
ಪಾಹಿ ಮಾಂ ಉಪದೇಷ್ಟ ಮಾರಕ
ಪಾಹಿ ಕಾಲಕ್ರೀಡನ ಸುಕರ್ತಾ ಸುಕಾಲಜ್ಞ।
ಪಾಹಿ ಕಾಲಸುಸೂಚಕನೆ ಮಾಂ
ಪಾಹಿ ಕಲಿಸಂಹರ್ತ ಕಲಿ ಮಾಂ
ಪಾಹಿ ಕಾಲ ಸ್ವಾಮರೇತ ಸದಾರತ ಸುಬಲನೆ ॥ ೨೭ ॥

ಪಾಹಿ ಪಾಹಿ ಸಹೋ ಸದಾಕಪಿ
ಪಾಹಿ ಗಮ್ಯ ಜ್ಞಾನ ದಶಕುಲ
ಪಾಹಿ ಮಾಂ ಶ್ರೋತವ್ಯ ನಮೊ ಸಂಕೀರ್ತಿತವ್ಯ ನಮೋ।
ಪಾಹಿ ಮಾಂ ಮಂತವ್ಯ ಕವ್ಯನೆ
ಪಾಹಿ ಮಾಂ ದ್ರಷ್ಟವ್ಯ ಸಖ್ಯನೆ
ಪಾಹಿ ಮಾಂ ಗಂತವ್ಯ ಕ್ರವ್ಯನೆ ಪಾಹಿ ಸ್ಮರ್ತವ್ಯ ॥ ೨೮ ॥

ಪಾಹಿ ಸೇವ್ಯ ಸುಭವ್ಯ ನಮೊ ಮಾಂ
ಪಾಹಿ ಸ್ವರ್ಗವ್ಯ ನಮೊ ಭವ್ಯನೆ
ಪಾಹಿ ಮಾಂ ಜ್ಞಾತವ್ಯ ನಮೊ ವಕ್ತವ್ಯ ಗವ್ಯ ನಮೋ।
ಪಾಹಿ ಮಾಂ ಲಾತವ್ಯ ವಾಯುವೆ
ಪಾಹಿ ಬ್ರಹ್ಮ ಬ್ರಾಹ್ಮಣಪ್ರಿಯ
ಪಾಹಿ ಪಾಹಿ ಸರಸ್ವತೀಪತೆ ಜಗದ ಗುರುವರ್ಯ ॥ ೨೯ ॥

ವಿಶ್ವವ್ಯಾಪಕಹರಿಗೆ ತಾ ಸಾ-
ದೃಶ್ಯರೂಪವ ಧರಿಸಿ ಬ್ರಹ್ಮ ಸ-
ರಸ್ವತೀ ಭಾರತಿಗಳಿಂದೊಡಗೂಡಿ ಪವಮಾನ।
ಶಾಶ್ವತಸುಭಕ್ತಿಯಲಿ ಸುಜ್ಞಾ-
ನಸ್ವರೂಪನ ರೂಪಗುಣಗಳ-
ನಶ್ವರವು ಎಂದೆನುತ ಪೊಗಳುವ ಶ್ರುತಿಗಳೊಳಗಿದ್ದು ॥ ೨೦ ॥

ಖೇಟ ಕುಕ್ಕುಟ ಜಲಟವೆಂಬ ತ್ರಿ-
ಕೋಟಿ ರೂಪವ ಧರಿಸಿ ಸತತ ನಿ-
ಶಾಟರನ ಸಂಹರಿಸಿ ಸಲಹುವ ಸರ್ವಸಜ್ಜನರ।
ಕೈಟಭಾರಿಯ ಪುರದ ಪ್ರಥಮ ಕ-
ವಾಟನೆನಿಸುವ ಗರುಡಶೇಷಲ-
ಲಾಟಲೋಚನಮುಖ್ಯಸುರರಿಗೆ ಆವಕಾಲದಲಿ ॥ ೨೧ ॥

ಈ ಋಜುಗಳೊಳಗೊಬ್ಬ ಸಾಧನ
ನೂರುಕಲ್ಪದಿ ಮಾಡಿ ಕರೆಸುವ
ಚಾರುತರಮಂಗಳ ಸುನಾಮದಿ ಕಲ್ಪಕಲ್ಪದಲಿ।
ಸೂರಿಗಳು ಸಂತುತಿಸಿ ವಂದಿಸೆ
ಘೋರದುರಿತಗಳಳಿದು ಪೋಪವು
ಮಾರಮಣ ಸಂಪ್ರೀತನಾಗುವ ಸರ್ವಕಾಲದಲಿ ॥ ೨೨ ॥

ಪಾಹಿ ಕಲ್ಕಿ ಸುತೇಜ ದಾಸನೆ
ಪಾಹಿ ಧರ್ಮಾಧರ್ಮಖಂಡನೆ
ಪಾಹಿ ವರ್ಚಸ್ವೀ ಋಷಣ ನಮೊ ಸಾಧು ಮಹಿಪತಿಯೆ।
ಪಾಹಿ ಸದ್ಧರ್ಮಜ್ಞ ಧರ್ಮಜ
ಪಾಹಿ ಸಂಪೂರ್ಣ ಶುಚಿವೈಕೃತ
ಪಾಹಿ ಅಂಜನ ಸರ್ಪಪನೆ ಖರ್ಪಟನೆ ಶ್ರದ್ಧಾಹ್ವ ॥ ೨೩ ॥

ಪಾಹಿ ಸಂಧ್ಯಾತ ವಿಜ್ಞಾನನೆ
ಪಾಹಿ ಮಹವಿಜ್ಞಾನ ಕೀರ್ತನ
ಪಾಹಿ ಸಂಕೀರ್ಣಾಖ್ಯ ಕತ್ಥನ ಪಾಹಿ ಬುದ್ಧ ಜಯ।
ಪಾಹಿ ಮಾಹತ್ತರ ಸುವೀರ್ಯನೆ
ಪಾಹಿ ಮಾಂ ಮೇಧಾವಿ ಜಯಜಯ
ಪಾಹಿ ಮಾಂ ರಂತಿಮ್ನ ಮನು ಮಾಂ ಪಾಹಿ ಮಾಂ ಪಾಹಿ ॥ ೨೪ ॥

ಪಾಹಿ ಮೋದ ಪ್ರಮೋದ ಸಂತತ
ಪಾಹಿ ಆನಂದ ಸಂತುಷ್ಟನೆ
ಪಾಹಿ ಮಾಂ ಚಾರ್ವಂಗ ಚಾರುಸುಬಾಹು ಚಾರುಪದ।
ಪಾಹಿ ಪಾಹಿ ಸುಲೋಚನನೆ ಮಾಂ
ಪಾಹಿ ಸಾರಸ್ವತ ಸುವೀರನೆ
ಪಾಹಿ ಪ್ರಾಜ್ಞನೆ ಕಪಿ ಅಲಂಪಟ ಪಾಹಿ ಸರ್ವಜ್ಞ ॥ ೨೫ ॥

ಪಾಹಿ ಮಾಂ ಸರ್ವಜಿತು ಮಿತ್ರನೆ
ಪಾಹಿ ಪಾಪವಿನಾಶಕನೆ ಮಾಂ
ಪಾಹಿ ಧರ್ಮವಿನೇತ ಶಾರದ ಓಜ ಸುತಪಸ್ವಿ।
ಪಾಹಿ ಮಾಂ ತೇಜಸ್ವಿ ನಮೊ ಮಾಂ
ಪಾಹಿ ದಾನಸುಶೀಲ ನಮೊ ಮಾಂ
ಪಾಹಿ ಯಜ್ಞ ಸುಕರ್ತ ಯಜ್ವೀ ಯಾಗವರ್ತಕನೆ ॥ ೨೬ ॥

ಪಾಹಿ ಪ್ರಾಣ ತ್ರಾಣ ಅಮರಿಷಿ
ಪಾಹಿ ಮಾಂ ಉಪದೇಷ್ಟ ಮಾರಕ
ಪಾಹಿ ಕಾಲಕ್ರೀಡನ ಸುಕರ್ತಾ ಸುಕಾಲಜ್ಞ।
ಪಾಹಿ ಕಾಲಸುಸೂಚಕನೆ ಮಾಂ
ಪಾಹಿ ಕಲಿಸಂಹರ್ತ ಕಲಿ ಮಾಂ
ಪಾಹಿ ಕಾಲ ಸ್ವಾಮರೇತ ಸದಾರತ ಸುಬಲನೆ ॥ ೨೭ ॥

ಪಾಹಿ ಪಾಹಿ ಸಹೋ ಸದಾಕಪಿ
ಪಾಹಿ ಗಮ್ಯ ಜ್ಞಾನ ದಶಕುಲ
ಪಾಹಿ ಮಾಂ ಶ್ರೋತವ್ಯ ನಮೊ ಸಂಕೀರ್ತಿತವ್ಯ ನಮೋ।
ಪಾಹಿ ಮಾಂ ಮಂತವ್ಯ ಕವ್ಯನೆ
ಪಾಹಿ ಮಾಂ ದ್ರಷ್ಟವ್ಯ ಸಖ್ಯನೆ
ಪಾಹಿ ಮಾಂ ಗಂತವ್ಯ ಕ್ರವ್ಯನೆ ಪಾಹಿ ಸ್ಮರ್ತವ್ಯ ॥ ೨೮ ॥

ಪಾಹಿ ಸೇವ್ಯ ಸುಭವ್ಯ ನಮೊ ಮಾಂ
ಪಾಹಿ ಸ್ವರ್ಗವ್ಯ ನಮೊ ಭವ್ಯನೆ
ಪಾಹಿ ಮಾಂ ಜ್ಞಾತವ್ಯ ನಮೊ ವಕ್ತವ್ಯ ಗವ್ಯ ನಮೋ।
ಪಾಹಿ ಮಾಂ ಲಾತವ್ಯ ವಾಯುವೆ
ಪಾಹಿ ಬ್ರಹ್ಮ ಬ್ರಾಹ್ಮಣಪ್ರಿಯ
ಪಾಹಿ ಪಾಹಿ ಸರಸ್ವತೀಪತೆ ಜಗದ ಗುರುವರ್ಯ ॥ ೨೯ ॥

ವಾಮನಪುರಾಣದಲಿ ಪೇಳಿದ
ಈ ಮಹಾತ್ಮರ ಪರಮಮಂಗಳ
ನಾಮಗಳ ಸಂಪ್ರೀತಿಪೂರ್ವಕ ನಿತ್ಯ ಸ್ಮರಿಸುವರ।
ಶ್ರೀಮನೋರಮ ಅವರು ಬೇಡಿದ
ಕಾಮಿತಾರ್ಥಗಳಿತ್ತು ತನ್ನ ತ್ರಿ-
ಧಾಮದೊಳಗನುದಿನದಲಿಟ್ಟಾನಂದಬಡಿಸುವನು ॥ ೩೦ ॥

ಈ ಸಮೀರಗೆ ನೂರುಜನ್ಮ ಮ-
ಹಾಸುಖ ಪ್ರಾರಬ್ಧ ಭೋಗ ಪ್ರ-
ಯಾಸವಿಲ್ಲದೆ ಐದಿದನು ಲೋಕಾಧಿಪತ್ಯವನು।
ಭೂಸುರನ ಒಪ್ಪಿಡಿ ಅವಲಿಗೆ ವಿ-
ಶೇಷಸೌಖ್ಯವನಿತ್ತ ದಾತನ
ದಾಸವರ್ಯನು ಲೋಕಪತಿಯೆನಿಸುವುದು ಅಚ್ಚರವೆ ॥ ೩೧ ॥

ದ್ವಿಶತಕಲ್ಪಗಳಲ್ಲಿ ಬಿಡದೀ
ಪೆಸರಿನಿಂದಲಿ ಕರೆಸಿದನು ತ-
ನ್ನೊಶಗ ಅಮರರೊಳಿದ್ದು ಮಾಡುವನವರ ಸಾಧನವ।
ಅಸದುಪಾಸನೆಗೈವ ಕಲ್ಯಾ-
ದ್ಯಸುರಪರ ಸಂಹರಿಸಿ ತಾ ಪೊಂ-
ಬಸುರಪದವೈದಿದನು ಗುರುಪವಮಾನ ಸತಿಯೊಡನೆ ॥ ೩೨ ॥

ಅನಿಮಿಷರ ನಾಮದಲಿ ಕರೆಸುವ
ಅನಿಲದೇವನು ಒಂದು ಕಲ್ಪದಿ
ವನಜಸಂಭವನೆನಿಸಿ ಎಂಭತ್ತೇಳುವರೆ ವರುಷ।
ಗುಣತ್ರಯವಿವರ್ಜಿತನ ಮಂಗಳ
ಗುಣಕ್ರಿಯಾರೂಪಗಳ ಊಪಾ-
ಸನವು ಅವ್ಯಕ್ತಾದಿ ಪೃಥ್ಟಂತರದಿ ಇರುತಿಹುದು ॥ ೩೩ ॥

ಮಹಿತ ಋಜುಗಣಕೊಂದೆ ಪರಮೋ-
ತ್ಸಹವಿವರ್ಜಿತವೆಂಬ ದೋಷವು
ವಿಹಿತವೇ ಸರಿ ಇದನು ಪೇಳ್ದಿರೆ ಮುಕ್ತಬ್ರಹ್ಮರಿಗೆ।
ಬಹದು ಸಾಮ್ಯ ಜ್ಞಾನಭಕ್ತಿಯು
ದ್ರುಹಿಣಪದ ಪರಿಯಂತ ವೃದ್ಧಿಯು
ಬಹಿರುಪಾಸನ ಉಂಟನಂತರ ಬಿಂಬದರ್ಶನವು ॥ ೩೪ ॥

ಜ್ಞಾನರಹಿತಭಯತ್ವ ಪೇಳ್ವ ಪು-
ರಾಣದೈತ್ಯರ ಮೋಹಕವು ಚತು-
ರಾನನಗೆ ಕೂಡುವುದೆ ಮೋಹಾಜ್ಞಾನ ಭಯ ಶೋಕ।
ಭಾನುಮಂಡಲ ಚಲಿಸಿದಂದದಿ
ಕಾಣುವುದು ದೃಗ್ದೋಷದಿಂದಲಿ
ಶ್ರೀನಿವಾಸನ ಪ್ರೀತಿಗೋಸುಗ ತೋರ್ದನಲ್ಲದಲೆ ॥ ೩೫ ॥

ಕಮಲಸಂಭವ ಸರ್ವರೊಳಗು-
ತ್ತಮನೆನಿಸುವನು ಎಲ್ಲಕಾಲದಿ
ವಿಮಲಭಕುತಿ ಜ್ಞಾನ ವೈರಾಗ್ಯಾದಿ ಗುಣದಿಂದ।
ಸಮಭ್ಯಧಿಕವರ್ಜಿತನ ಗುಣಗಳ
ರಮೆಯ ಮುಖದಿಂದರಿತು ನಿತ್ಯದಿ
ದ್ಯುಮಣಿಕೋಟಿಗಳಂತೆ ಕಾಂಬನು ಬಿಂಬರೂಪವನು ॥ ೩೬ ॥

ಜ್ಞಾನಭಕ್ತ್ಯಾದ್ಯಖಿಲಗುಣಚತು-
ರಾನನೊಳಗಿಪ್ಪಂತೆ ಮುಖ್ಯ-
ಪ್ರಾಣನಲಿ ಚಿಂತಿಪುದು ಯತ್ಕಿಂಚಿತ್ ಕೊರತೆಯಾಗಿ।
ನ್ಯೂನ ಋಜುಗಣಜೀವರಲ್ಲಿ ಕ್ರ-
ಮೇಣ ವೃದ್ಧಿ ಜ್ಞಾನಭಕ್ತಿ ಸ-
ಮಾನ ಭಾರತಿವಾಣಿಗಳಲಿ ಪದಪ್ರಯುಕ್ತಧಿಕ ॥ ೩೭ ॥

ಸೌರಿ ಸೂರ್ಯನ ತೆರದಿ ಬ್ರಹ್ಮ ಸ-
ಮೀರಗಾಯತ್ರೀಗಿರಿಗಳೊಳು
ತೋರುವುದು ಅಸ್ಪಷ್ಟರೂಪದಿ ಮುಕ್ತಿಪರಿಯಂತ।
ವಾರಿಜಾಸನ ವಾಯು ವಾಣೀ-
ಭಾರತಿಗಳಿಗೆ ಮಾಹಪ್ರಳಯದಿ
ಬಾರದಜ್ಞಾನಾದಿದೋಷವು ಹರಿಕೃಪಾಬಲದಿ ॥ ೩೮ ॥

ನೂರುವರುಷಾನಂತರದಲಿ ಸ-
ರೋರುಹಾಸನ ತನ್ನ ಕಲ್ಪದ-
ಲಾರು ಮುಕ್ತಿಯನೈದುವರೊ ಅವರವರ ಕರೆದೊಯ್ದು।
ಶೌರಿಪುರದೊಳಗಿಪ್ಪ ನದಿಯಲಿ
ಕಾರುಣಿಕ ಸುಸ್ನಾನ ನಿಜಪರಿ-
ವಾರಸಹಿತದಿ ಮಾಡಿ ಹರಿ ಉದರ ಪ್ರವೇಶಿಸುವ ॥ ೩೯ ॥

ವಾಸುದೇವನ ಉದರದಲ್ಲಿ ಪ್ರ-
ವೇಶಗೈದಾನಂತರದಿ ನಿ-
ರ್ದೋಷಮುಕ್ತರು ಉದರದಿಂ ಪೊರಮಟ್ಟು ಹರುಷದಲಿ।
ಮೇಶನಿಂದಾಪ್ಲವ ಪಡೆದನಂ-
ತಾಸನ ಸಿತದ್ವೀಪ ಮೋಕ್ಷದಿ
ವಾಸವಾಗಿ ವಿಮುಕ್ತದುಃಖರು ಸಂಚರಿಸುತಿಹರು ॥ ೪೦ ॥

ಸತ್ವ ಸತ್ವ ಮಹಾಸುಸೂಕ್ಷ್ಮಕ-
ಸತ್ವ ಸತ್ವಾತ್ಮಕ ಕಳೇವರ
ಸತ್ಯಲೋಕಾಧಿಪನೆನಿಪಗತ್ಯಲ್ಪವೆರಡುಗುಣ।
ಮುಕ್ತಿಯೋಗ್ಯವಿದಲ್ಲಜಾಂಡೋ-
ತ್ಪತ್ತಿಕಾರಣವಲ್ಲ ಹರಿಪ್ರೀ-
ತ್ಯರ್ಥವಾಗೀ ಜಗದ ವ್ಯಾಪಾರಗಳ ಮಾಡುವನು ॥ ೪೧ ॥

ಪಾದನ್ಯೂನ ಶತಾಬ್ದ ಪರಿಯಂ-
ತೋದಿ ಉಗ್ರತಪಾಹ್ವಯದಿ ಲವ-
ಣೋದಧಿಯೊಳಗೆ ಕಲ್ಪದಶ ತಪವಿರ್ದನಂತರದಿ।
ಸಾಧಿಸಿದ ಮಹದೇವಪದವಾ-
ರೈದು ನವ ಕಲ್ಪಾವಸಾನಕೆ
ಐದುವನು ಶೇಷನ ಪದವ ಪಾರ್ವತಿ ಸಹಿತನಾಗಿ ॥ ೪೨ ॥

ಇಂದ್ರ ಮನುದಶಕಲ್ಪಗಳಲಿ ಸು-
ನಂದನಾಮದಿ ಶ್ರವಣಗೈದು ಮು-
ಕುಂದನಪರೋಕ್ಷಾರ್ಥ ನಾಲ್ಕು ಸುಕಲ್ಪ ತಪವಿರ್ದು।
ನೊಂದು ಪೊಗೆಯೊಳು ಕೋಟಿವರುಷ ಪು-
ರಂದರನು ಅದನುಂಡನಂತರ
ಪೊಂದಿದನು ನಿಜಲೋಕ ಸುರಪತಿ ಕಾಮ ಇದರಂತೆ ॥ ೪೩ ॥

ಕರೆಸುವರು ಪೂರ್ವದಲಿ ಚಂದ್ರಾ-
ರ್ಕರತಿಶಾಂತ ಸುರೂಪ ನಾಮದಿ
ಎರಡೆರಡು ಮನುಕಲ್ಪ ಶ್ರವಣವ ಗೈದು ಮನುಕಲ್ಪ।
ವರತಪೋಬಲದಿಂದ ಅರ್ವಾಕ್
ಶಿರಗಳಾಗೀರ್ರೈದು ಸಾವಿರ
ವರುಷ ದುಃಖವ ನೀಗಿ ಕಾಂಬರು ಬಿಂಬರೂಪವನು ॥ ೪೪ ॥

ಸಾಧನಗಳಪರೋಕ್ಷನಂತರ
ಐದುವರು ಮೋಕ್ಷವನು ಶಿವ ಶ-
ಕ್ರಾದಿ ದಿವಿಜರು ಉಕ್ತಕ್ರಮದಿಂ ಕಲ್ಪಸಂಖ್ಯೆಯಲಿ।
ಐದಲೆಯಗೈವತ್ತುಪೇಂದ್ರಸ-
ಹೋದರನಿಗಿಪ್ಪತ್ತು ದ್ವಿನವ ತ್ವ-
ಗಾಧಿಪತಿ ಪ್ರಾಣನಿಗೆ ಗುರುಮನುಗಳಿಗೆ ಷೋಡಶವು ॥ ೪೫ ॥

ಪ್ರವಹಮರುತಗೆ ಹನ್ನೆರಡು ಸ್ಯಂ-
ಧವ ದಿವಾಕರಧರ್ಮರಿಗೆ ದಶ-
ನವ ಸುಕಲ್ಪವು ಮಿತ್ರರಿಗೆ ಶೇಷಶತ ಜನಕೆಂಟು।
ಕವಿಸನಕ ಸುಸನಂದನ ಸನ-
ತ್ಕುವರಮುನಿಗಳಿಗೇಳು ವರುಣನ
ಯುವತಿ ಪರ್ಜನ್ಯಾದಿ ಪುಷ್ಕರಗಾರು ಕಲ್ಪದಲಿ ॥ ೪೬ ॥

ಐದು ಕರ್ಮಜ ಸುರರಿಗಾಜಾ-
ನಾದಿಗಳಿಗೆರಡೆರಡು ಕಲ್ಪಾ-
ರ್ಧಾದಿಕತ್ರಯ ಗೋಪಿಕಾಸ್ತ್ರೀಯರು ಪಿತೃತ್ರಯವು।
ಈ ದಿವೌಕಸ ಮನುಜಗಾಯಕ-
ರೈದುವರು ಎರಡೊಂದು ಕಲ್ಪ ನ-
ರಾಧಿಪರಿಗರೆಕಲ್ಪದೊಳಗಪರೋಕ್ಷವಿರುತಿಹದು ॥ ೪೭ ॥

ದೀಪಗಳನನುಸರಿಸಿ ದೀಪ್ತಿಯು
ವ್ಯಾಪಿಸಿ ಮಹಾತಿಮಿರ ಕಳೆದು ಪ-
ರೋಪಕಾರವ ಮಾಳ್ಪ ತೆರದಂದದಲಿ ಪರಮಾತ್ಮ।
ಆ ಪಯೋಜಾಸನನೊಳಿದ್ದು ಸ್ವ-
ರೂಪಶಕ್ತಿಯ ವ್ಯಕ್ತಿಗೈಸುತ
ತಾ ಪೊಳೆವನವರಂತೆ ಚೇಷ್ಟೆಯ ಮಾಡಿ ಮಾಡಿಸುತ ॥ ೪೮ ॥

ಸ್ವೋದರಸ್ಥಿತ ಪ್ರಾಣ ರುದ್ರೇಂ-
ದ್ರಾದಿಸುರರಿಗೆ ದೇಹಗಳ ಕೊ-
ಟ್ಟಾದರದಿ ಅವರವರ ಸೇವೆಯ ಕೊಂಬನನವರತ।
ಮೋದ ಬೋಧ ದಯಾಬ್ಧಿ ತನ್ನವ-
ರಾಧಿರೋಗವ ಕಳೆದು ಮಹದಪ-
ರಾಧಗಳ ನೋಡದಲೆ ಸಲಹುವ ಸತತ ಸ್ಮರಿಸುವರ ॥ ೪೯ ॥

ಪ್ರತಿಪ್ರತೀ ಕಲ್ಪದಲಿ ಸೃಷ್ಟಿ-
ಸ್ಥಿತಿ ಲಯವ ಮಾಡುತಲಿ ಮೋದಿಪ
ಚತುರಮುಖ ಪವಮಾನರನ್ನವ ಮಾಡಿ ಭುಂಜಿಸುವ।
ಘೃತವೆ ಮೃತ್ಯುಂಜಯನೆನಿಪ ದೇ-
ವತೆಗಳೇ ಉಪಸೇಚನರು ಶ್ರೀ-
ಪತಿಗೆ ಮೂರ್ಜಗವೆಲ್ಲ ಓದನತಿಥಿಯೆನಿಸಿಕೊಂಬ ॥ ೫೦ ॥

ಗರ್ಭಿಣಿಸ್ತ್ರೀ ಉಂಡ ಭೋಜನ
ಗರ್ಭಗತಶಿಶು ಉಂಬ ತೆರದಲಿ
ನಿರ್ಭಯನು ತಾನುಂಡುಣಿಸುವನು ಸರ್ವಜೀವರಿಗೆ।
ನಿರ್ಬಲತಿಪರಮಾಣು ಜೀವಗೆ
ಅಬ್ಬುವುದೆ ಸ್ಥೂಲಾನ್ನ ಭೋಜನ
ಅರ್ಭಕರು ಪೇಳುವರು ಕೋವಿದರಿದನೊಡಂಬಡರು ॥ ೫೧ ॥

ಅಪಚಯಗಳಿಲ್ಲುಂಡದದರಿಂ-
ದುಪಚಯಗಳಿಲ್ಲಮರಗಣದೊಳ-
ಗುಪಮರೆನಿಸುವರಿಲ್ಲ ಜನ್ಮಾದಿಗಳು ಮೊದಲಿಲ್ಲ।
ಅಪರಿಮಿತಸನ್ಮಹಿಮ ಭಕ್ತರ
ಅಪುನರಾವರ್ತರನ ಮಾಡುವ
ಕೃಪಣವತ್ಸಲ ಸ್ವಪದ ಸೌಖ್ಯವನಿತ್ತು ಶರಣರಿಗೆ ॥ ೫೨ ॥

ಬಿತ್ತಿ ಬೀಜವ ಭೂಮಿಯೊಳು ನೀ-
ರೆತ್ತಿ ಬೆಳೆಸಿದ ಬೆಳಸು ಪ್ರಾಂತಕೆ
ಕಿತ್ತಿ ಮೆಲುವಂದದಲಿ ಲಕ್ಷ್ಮೀರಮಣ ಲೋಕಗಳ।
ಮತ್ತೆ ಜೀವರ ಕರ್ಮ ಕಾಲೋ-
ತ್ಪತ್ತಿ ಸ್ಥಿತಿ ಲಯ ಮಾಡುತಲಿ ಸಮ-
ವರ್ತಿಯೆನಿಸುವ ಖೇದಮೋದಗಳಿಲ್ಲ ಅನವರತ ॥ ೫೩ ॥

ಶ್ವಸನ ರುದ್ರೇಂದ್ರ ಪ್ರಮುಖ ಸುಮ-
ನಸರೊಳಿದ್ದರು ಕ್ಷುತ್ಪಿಪಾಸಗ-
ಳೊಶದೊಳಿಪ್ಪವು ಸಕಲಭೋಗಕೆ ಸಾಧನಗಳಾಗಿ।
ಅಸುರ ಪ್ರೇತ ಪಿಶಾಚಗಳ ಬಾ-
ಧಿಸುತಲಿಪ್ಪವು ದಿನದಿನದಿ ಮಾ-
ನಿಸರೊಳಗೆ ಮೃಗಪಕ್ಷಿಜೀವರೊಳಿದ್ದು ಪೋಗುವವು ॥ ೫೪ ॥

ವಾಸುದೇವಗೆ ಸ್ವಪ್ನ ಸುಪ್ತಿ ಪಿ-
ಪಾಸ ಕ್ಷುದ್ಭಯ ಶೋಕ ಮೋಹಾ-
ಯಾಸಪಸ್ಮೃತಿ ಮಾತ್ಸರಿಯ ಮದ ಪುಣ್ಯಪಾಪಾದಿ- ।
ದೋಷವರ್ಜಿತನೆಂದು ಬ್ರಹ್ಮಸ-
ದಾಶಿವಾದಿ ಸಮಸ್ತದಿವಿಜರು-
ಪಾಸನೆಯ ಗೈದೆಲ್ಲಕಾಲದಿ ಮುಕ್ತರಾಗಿಹರು ॥ ೫೫ ॥

ಪರಮಸೂಕ್ಷ್ಮಕ್ಷಣವಯಿದು ತ್ರುಟಿ
ಕರೆಸುವುದು ಐವತ್ತು ತ್ರುಟಿ ಲವ
ಎರಡು ಲವವು ನಿಮಿಷ ನಿಮಿಷಗಳು ಎಂಟು ಮಾತ್ರಯುಗ ।
ಗುರು ದಶ ಪ್ರಾಣರು ಪಳವು ಹ-
ನ್ನೆರಡು ಬಾಣವು ಘಳಿಗೆ ತ್ರಿಂಶತಿ
ಇರುಳು ಹಗಲರವತ್ತು ಘಟಿಕವು ಆಹೋರಾತ್ರಿಗಳು ॥ ೫೬ ॥

ಈ ದಿವಾರಾತ್ರಿಗಳೆರಡು ಹದಿ-
ನೈದುಪಕ್ಷಗಳೆರಡು ಮಾಸಗ-
ಳಾದಪವು ಮಾಸದ್ವಯವೆ ಋತು ಋತುತ್ರಯಗಳಯನ ।
ಐದುವವು ಅಯನ ದ್ವಯಾಬ್ದ ಕೃ-
ತಾದಿಯುಗಗಳು ದೇವಮಾನದಿ
ದ್ವಾದಶಸಹಸ್ರವರುಷಗಳಹವದನು ಪೇಳುವೆನು ॥ ೫೭ ॥

ಚತುರಸಾವಿರದೆಂಟುನೂರಿವು
ಕೃತಯುಗಕೆ ತ್ರಿಸಹಸ್ರ ಸಲೆ ಷಟ್-
ಶತವು ತ್ರೇತೆಗೆ ದ್ವಾಪರಕೆ ದ್ವಿಸಹಸ್ರ ನಾನ್ನೂರು ।
ದಿತಿಜಪತಿ ಕಲಿಯುಗಕೆ ಸಾವಿರ
ಶತಗಳ ದ್ವಯ ಕೂಡಿ ಈ ದೇ-
ವತೆಗಳಿಗೆ ಹನ್ನೆರಡುಸಾವಿರ ಅಹವು ವರುಷಗಳು ॥ ೫೮ ॥

ಪ್ರಥಮಯುಗಕೇಳಧಿಕ ಅರೆವಿಂ-
ಶತಿ ಸುಲಕ್ಷಾಷ್ಟೋತ್ತರಶತವಿಂ-
ಶತಿಸಹಸ್ರ ಮನುಷ್ಯಮಾನಾಬ್ದಗಳು ಷಣ್ಣವತಿ ।
ಮಿತಸಹಸ್ರದ ಲಕ್ಷದ್ವಾದಶ
ದ್ವಿತಿಯ ತೃತಿಯಕೆ ಎಂಟು ಲಕ್ಷದ
ಚತುರಷಷ್ಠಿಸಹಸ್ರ ಕಲಿಗಿದರರ್ಧ ಚಿಂತಿಪುದು ॥ ೫೯ ॥

ಮೂರಧಿಕ ನಾಲ್ವತ್ತು ಲಕ್ಷದ
ಆರುಮೂರೆರಡಧಿಕ ಸಾವಿರ
ಈರೆರಡು ಯುಗ ವರುಷ ಸಂಖ್ಯೆಯ ಗೈಯಲಿನಿತಿಹದು ।
ಸೂರಿ ಪೆಚ್ಚಿಸೆ ಸಾವಿರದ ನಾ-
ನ್ನೂರು ಮೂವತ್ತೆರಡು ಕೋಟಿ ಸ-
ರೋರುಹಾಸನಗಿದು ದಿವಸವೆಂಬರು ವಿಪಶ್ಚಿತರು ॥ ೬೦ ॥

ಶತಧೃತಿಗೆ ಈ ದಿವಸಗಳ ತ್ರಿಂ-
ಶತಿಯು ಮಾಸ ದ್ವಾದಶಾಬ್ದವು
ಶತವೆರಡರೊಳು ಸರ್ವಜೀವೋತ್ಪತ್ತಿ ಸ್ಥಿತಿ ಲಯವು ।
ಶ್ರುತಿಸ್ಮೃತಿಗಳು ಪೇಳುತಿಹವ-
ಚ್ಯುತಗೆ ನಿಮಿಷವಿದೆಂದು ಸುಖಶಾ-
ಶ್ವತಗೆ ಪಾಸಟೆಯೆಂಬರೆ ಬ್ರಹ್ಮಾದಿ ದಿವಿಜರನ ॥ ೬೧ ॥

ಆದಿಮಧ್ಯಾಂತಗಳು ಇಲ್ಲದ
ಮಾಧವಗಿದುಪಚಾರವೆಂದು ಋ-
ಗಾದಿ ವೇದಪುರಾಣಗಳು ಪೇಳುವವು ನಿತ್ಯದಲಿ ।
ಮೋದಮಯನಾನುಗ್ರಹವ ಸಂ-
ಪಾದಿಸಿ ರಮಾ ಬ್ರಹ್ಮ ರುದ್ರೇಂ-
ದ್ರಾದಿಗಳು ತಮ ತಮ್ಮ ಪದವಿಯನೈದಿ ಸುಖಿಸುವರು ॥ ೬೨ ॥

ಈ ಕಥಾಮೃತಪಾನ ಸುಖ ಸುವಿ-
ವೇಕಿಗಳಿಗಲ್ಲದಲೆ ವೈಷಿಕ-
ವ್ಯಾಕುಲಕುಚಿತ್ತರಿಗೆ ದೊರೆವದೆ ಆವಕಾಲದಲಿ ।
ಲೋಕವಾರ್ತೆಯ ಬಿಟ್ಟು ಇದನವ-
ಲೋಕಿಸುತ ಮೋದಿಪರಿಗೊಲಿದು ಕೃ-
ಪಾಕರ ಜಗನ್ನಾಥವಿಟ್ಠಲ ಪೊರೆವನನುದಿನದಿ ॥ ೬೩ ॥

*****

# ಹರಿಕಥಾಮೃತಸಾರ - ೧೦

## ಸಂಧಿ - ೩೨: ಕಕ್ಷ್ಯಾತಾರತಮ್ಯ ಸಂಧಿ

[ ರಾಗ: ತೋಡಿ - ರೂಪಕತಾಳ ]

ಶ್ರೀರಮಣ ಸರ್ವೇಶ ಸರ್ವಗ
ಸಾರಭೋಕ್ತ ಸ್ವತಂತ್ರ ದೋಷವಿ-
ದೂರ ಜ್ಞಾನಾನಂದಬಲಐಶ್ವರ್ಯಗುಣಪೂರ್ಣ ।
ಮೂರುಗುಣವರ್ಜಿತ ಸಗುಣ ಸಾ-
ಕಾರ ವಿಶ್ವಸ್ಥಿತಿಲಯೋದಯ-
ಕಾರಣ ಕೃಪಾಸಾಂದ್ರ ನರಹರೆ ಸಲಹೊ ಸಜ್ಜನರ ॥ ೧ ॥

ನಿತ್ಯಮುಕ್ತಳೆ ನಿರ್ವಿಕಾರಳೆ
ನಿತ್ಯಸುಖಸಂಪೂರ್ಣೆ ನಿತ್ಯಾ-
ನಿತ್ಯಜಗದಾಧಾರೆ ಮುಕ್ತಾಮುಕ್ತಗಣವಿನುತೆ ।
ಚಿತ್ತಯಿಸು ಬಿನ್ನಪವ ಶ್ರೀಪುರು-
ಷೋತ್ತಮನ ವಕ್ಷೋನಿವಾಸಿನಿ
ಭೃತ್ಯವತ್ಸಲೆ ಕಾಯೆ ತ್ರಿಜಗನ್ಮಾತೆ ವಿಖ್ಯಾತೆ ॥ ೨ ॥

ರೋಮಕೂಪಗಳೊಳು ಪೃಥಕ್‌ಪೃಥ-
ಕಾ ಮಹಾಪುರುಷನ ಸ್ವಮೂರ್ತಿಯ
ತಾಮರಸಜಾಂಡಗಳ ತದ್ಗತವಿಶ್ವರೂಪಗಳ ।
ಶ್ರೀಮಹಿಳೆ ರೂಪಗಳ ಗುಣಗಳ
ಸೀಮೆಗಾಣದೆ ಯೋಚಿಸುತ ಮಮ
ಸ್ವಾಮಿ ಮಹಿಮೆಯದೆಂತುಟೆಂದಡಿಗಡಿಗೆ ಬೆರಗಾದ ॥ ೩ ॥

ಒಂದಜಾಂಡದೊಳೊಂದು ರೂಪದೊ-
ಳೊಂದವಯವದೊಳೊಂದು ನಖದೊಳ-
ಗೊಂದು ಗುಣಗಳ ಪಾರಗಾಣದೆ ಕೃತಪುಟಾಂಜಲಿಯಿಂ ।
ಮಂದಜಾಸನ ಪುಲಕಪುಲಕಾ-
ನಂದಬಾಷ್ಪತೊದಲ್ನುಡಿಗಳಿಂ-
ದಿಂದಿರಾವಲ್ಲಭನ ಮಹಿಮೆ ಗಭೀರತರವೆಂದ ॥ ೪ ॥

ಏನು ಧನ್ಯರೊ ಬ್ರಹ್ಮಗುರುಪವ-
ಮಾನರಾಯರು ಈ ಪರಿಯಲಿ ರ-
ಮಾನಿವಾಸನ ವಿಮಲಲಾವಣ್ಯಾತಿಶಯಗಳನು।
ಸಾನುರಾಗದಿ ನೋಡಿ ಸುಖಿಪ ಮ-
ಹಾನುಭಾವರ ಭಾಗ್ಯವೆಂತೊ ಭ-
ವಾನಿಧವರಿಗಸಾಧ್ಯವೆನಿಸಲು ನರರ ಪಾಡೇನು ॥ ೫ ॥

ಆ ಪಿತಾಮಹ ನೂರುಕಲ್ಪ ರ-
ಮಾಪತಿಯ ಗುಣ ಜಪಿಸಿ ಒಲಿಸಿ ಮ-
ಹಾಪರಾಕ್ರಮ ಹನುಮಭೀಮಾನಂದಮುನಿಯೆನಿಸಿ।
ಆ ಪರಬ್ರಹ್ಮನ ಸುನಾಭೀ-
ಕೂಪಸಂಭವನಾಮದಲಿ ಮೆರೆ-
ವಾಪಯೋಜಾಸನಸಮೀರರಿಗಭಿನಮಿಪೆ ನಿತ್ಯ ॥ ೬ ॥

ವಾಸುದೇವನ ಮೂರ್ತಿ ಹೃದಯಾ-
ಕಾಶಮಂಡಲಮಧ್ಯದಲಿ ತಾ-
ರೇಶನಂದದಿ ಕಾಣುತತಿ ಸಂತೋಷದಲಿ ತುತಿಪ।
ಆ ಸರಸ್ವತಿಭಾರತಿಯರಿಗೆ
ನಾ ಸತತ ವಂದಿಸುವೆ ಪರಮೋ-
ಲ್ಲಾಸದಲಿ ಸುಜ್ಞಾನಭಕುತಿಯ ಸಲಿಸಲೆಮಗೆಂದು ॥ ೭ ॥

ಜಗದುದರನ ಸುರೋತ್ತಮನ ನಿಜ-
ಪೆಗಲೊಳಾಂತು ಕರಾಬ್ಜದೊಳು ಪದ-
ಯುಗ ಧರಿಸಿ ನಖಪಂಕ್ತಿಯೊಳು ರಮಣೀಯತರವಾದ।
ನಗಧರನ ಪ್ರತಿಬಿಂಬ ಕಾಣುತ
ಮಿಗೆ ಹರುಷದಿಂ ಪೊಗಳಿ ಹಿಗ್ಗುವ
ಖಗಕುಲಾಧಿಪ ಕೊಡಲಿ ಮಂಗಳ ಸಕಲಸುಜನರಿಗೆ ॥ ೮ ॥

ಯೋಗಿಗಳ ಹೃದಯಕೆ ನಿಲುಕ ನಿಗ-
ಮಾಗಮೈಕವಿನುತನ ಪರಮನು-
ರಾಗದಲಿ ದ್ವಿಸಹಸ್ರಜಿಹ್ವೆಗಳಿಂದ ವರ್ಣಿಸುವ।
ಭೂಗಗನಪಾತಾಳವ್ಯಾಪ್ತನ
ಯೋಗನಿದ್ರಾಸ್ಪದನೆನಿಪ ಗುರು
ನಾಗರಾಜನ ಪದಕೆ ನಮಿಸುವೆ ಮನದೊಳನವರತ ॥ ೯ ॥

ನಂದಿವಾಹನ ನಳಿನಿಧರ ಮೌ-
ಳೀಂದುಶೇಖರ ಶಿವ ತ್ರಿಯಂಬಕ
ಅಂಧಕಾಸುರಮಥನ ಗಜಶಾರ್ದೂಲಚರ್ಮಧರ ।
ಮಂದಜಾಸನತನಯ ತ್ರಿಜಗ-
ದ್ವಂದ್ಯ ಶುದ್ಧಸ್ಫಟಿಕಸನ್ನಿಭ
ವಂದಿಸುವೆನನವರತ ಪಾಲಿಸು ಪಾರ್ವತೀರಮಣ ॥ ೧೦ ॥

ಫಣಿಫಣಾಂಚಿತಮಕುಟರಂಜಿತ
ಕ್ವಣಿತಡಮರತ್ರಿಶೂಲ ಶಿಖಿದಿನ-
ಮಣಿನಿಶಾಕರನೇತ್ರ ಪರಮಪವಿತ್ರ ಸುಚರಿತ್ರ ।
ಪ್ರಣತಕಾಮದ ಪ್ರಮಥಸುರಮುನಿ-
ಗಣಸುಪೂಜಿತಚರಣಯುಗ ರಾ-
ವಣಮದವಿಭಂಜನ ಸತತ ಮಾಂ ಪಾಹಿ ಮಹದೇವ ॥ ೧೧ ॥

ದಕ್ಷಯಜ್ಞವಿಭಂಜನನೆ ವಿರು-
ಪಾಕ್ಷ ವೈರಾಗ್ಯಾಧಿಪತಿ ಸಂ-
ರಕ್ಷಿಸೆಮ್ಮನು ಸರ್ವಕಾಲದಿ ಸನ್ಮುದವನಿತ್ತು ।
ಯಕ್ಷಪತಿಸಖ ಯಜಿಪರಿಗೆ ಸುರ-
ವೃಕ್ಷ ವೃಕದನುಜಾರಿ ಲೋಕಾ-
ಧ್ಯಕ್ಷ ಶುಕ ದೂರ್ವಾಸ ಜೈಗೀಷವ್ಯ ಸಂತೈಸು ॥ ೧೨ ॥

ಹತ್ತುಕಲ್ಪದಿ ಲವಣಜಲಧಿಯೊ-
ಳುತ್ತಮಶ್ಲೋಕನ ಒಲಿಸಿ ಕೃತ-
ಕೃತ್ಯನಾಗಿ ಜಗತ್ಪತಿಯ ನೇಮದಿ ಕುಶಾಸ್ತ್ರಗಳ ।
ಬಿತ್ತರಿಸಿ ಮೋಹಿಸಿ ದುರಾತ್ಮರ
ನಿತ್ಯನಿರಯನಿವಾಸರೆನಿಸಿದ
ಕೃತ್ತಿವಾಸಗೆ ನಮಿಪೆ ಶೇಷಪದಾರ್ಹನಹುದೆಂದು ॥ ೧೩ ॥

ಕಂಬುಪಾಣಿಯ ಪರಮಪ್ರೇಮನಿ-
ತಂಬಿನಿಯರೆಂದೆನಿಪ ಲಕ್ಷಣ
ಜಾಂಬವತಿ ಕಾಳಿಂದಿ ನೀಲಾ ಭದ್ರ ಸಖವಿಂದ- ।
ರೆಂಬ ಷಣ್ಮಹಿಷಿಯರ ದಿವ್ಯ ಪ-
ದಾಂಬುಜಗಳಿಗೆ ನಮಿಪೆ ಮಮ ಹೃದ-
ಯಾಂಬರದಿ ನೆಲಸಲಿ ಬಿಡದೆ ತಮ್ಮರಸನೊಡಗೂಡಿ ॥ ೧೪ ॥

ಆ ಪರಂತಪನೊಲಿಮೆಯಿಂದ ಸ-
ದಾಪರೋಕ್ಷಿಗಳೆನಿಸಿ ಭಗವ-
ದ್ರೂಪಗುಣಗಳ ಮಹಿಮೆ ಸ್ವಪತಿಗಳಾನನದಿ ತಿಳಿವ।
ಸೌಪರಣಿ ವಾರುಣಿ ನಗಾತ್ಮಜ-
ರಾಪನಿತು ಬಣ್ಣಿಸುವೆ ಎನ್ನ ಮ-
ಹಾಪರಾಧಗಳೆಣಿಸದೀಯಲಿ ಪರಮಮಂಗಳವ ॥ ೧೫ ॥

ತ್ರಿದಿವತರುಮಣಿಧೇನುಗಳಿಗಾ-
ಸ್ಪದನೆನಿಪ ತ್ರಿದಶಾಲಯಾಬ್ಧಿಗೆ
ಬದರನಂದದಲೊಪ್ಪುತಿಪ್ಪ ಉಪೇಂದ್ರಚಂದ್ರಮನ।
ಮೃದುಮಧುರಸುಸ್ತವನದಿಂದತಿ-
ಮಧುಸಮಯಪಿಕನಂತೆ ಪಾಡುವ
ಮುದಿರವಾಹನನಂಘ್ರಿಯುಗ್ಮಂಗಳಿಗೆ ನಮಿಸುವೆನು ॥ ೧೬ ॥

ಕೃತಿರಮಣಪ್ರದ್ಯುಮ್ನದೇವನ
ಅತುಲಬಲಲಾವಣ್ಯಗುಣ ಸಂ-
ತತ ಉಪಾಸನ ಕೇತುಮಾಲಾಖಂಡದೊಳು ರಚಿಪ।
ರತಿಮನೋಹರನಂಘ್ರಿಕಮಲಕೆ
ನತಿಸುವೆನು ಭಕುತಿಯಲಿ ಮಮ ದು-
ರ್ಮತಿ ಕಳೆದು ಸನ್ಮತಿಯನೀಯಲಜಸ್ರ ಎಮಗೊಲಿದು ॥ ೧೭ ॥

ಚಾರುತರನವವಿಧಭಕುತಿಗಂ-
ಭೀರವಾರಾಶಿಯೊಳು ಪರಮೋ-
ದಾರಮಹಿಮನ ಹೃದಯಫಣಿಪತಿಪೀಠದಲಿ ಭಜಿಪ।
ಭೂರಿಕರ್ಮಾಕರನೆನಿಸುವ ಶ-
ರೀರಮಾನಿ ಪ್ರಾಣಪತಿ ಪದ-
ವಾರಿರುಹಕಾನಮಿಪೆ ಮದ್ಗುರುರಾಯರಹುದೆಂದು ॥ ೧೮ ॥

ವಿತತಮಹಿಮನ ವಿಶ್ವತೋಮುಖ-
ನತುಲಭುಜಬಲಕಲ್ಪತರುವಾ-
ಶ್ರಿತರೆನಿಸಿ ಸಕಲೇಷ್ಟ ಪಡೆದನುದಿನದಿ ಮೋದಿಸುವ।
ರತಿ ಸ್ವಯಂಭುವ ದಕ್ಷ ವಾಚ-
ಸ್ಪತಿ ಬಿಡೌಜನ ಮಡದಿ ಶಚಿ ಮ-
ನ್ಮಥಕುಮಾರನಿರುದ್ಧರೆಮಗೀಯಲಿ ಸುಮಂಗಳವ ॥ ೧೯ ॥

ಭವವನಧಿನವಪೋತ ಪುಣ್ಯ-
ಶ್ರವಣಕೀರ್ತನಪಾದವನರುಹ-
ಭವನ ನಾವಿಕನಾಗಿ ಭಜಕರ ತಾರಿಸುವ ಬಿಡದೆ।
ಪ್ರವಹಮಾರುತದೇವ ಪರಮೋ-
ತ್ಸವ ವಿಶೇಷ ನಿರಂತರ ಮಹಾ-
ಪ್ರವಹದಂದದಿ ಕೊಡಲಿ ಭಗವದ್ಭಕ್ತಸಂತತಿಗೆ ॥ ೨೦ ॥

ಜನರನುದ್ಧರಿಸುವೆನೆನುತ ನಿಜ-
ಜನಕನನುಮತದಲಿ ಸ್ವಯಂಭುವ
ಮನುವಿನಿಂದಲಿ ಪಡದೆ ಸುಕುಮಾರಕರನೊಲಿಮೆಯಲಿ।
ಜನನಿ ಶತರೂಪಾನಿತಂಬಿನಿ
ಮನವಚನಕಾಯದಲಿ ಬಿಡದನು-
ದಿನ ನಮಿಸುವೆನು ಕೊಡು ಎಮಗೆ ಸನ್ಮಂಗಳವನೊಲಿದು ॥ ೨೧ ॥

ನರನ ನಾರಾಯಣನ ಹರಿಕೃ-
ಷ್ಣರ ಪಡೆದೆ ಪುರುಷಾರ್ಥತೆರದಲಿ
ತರಣಿ ಶಶಿ ಶತರೂಪರಿಗೆ ಸಮನೆನಿಸಿ ಪಾಪಿಗಳ।
ನಿರಯದೊಳು ನೆಲೆಗೊಳಿಸಿ ಸಜ್ಜನ
ನೆರವಿಯನು ಪಾಲಿಸುವ ಔದುಂ-
ಬರ ಸಲಹು ಸಲಹೆಮ್ಮ ಬಿಡದಲೆ ಪರಮಕರುಣದಲಿ ॥ ೨೨ ॥

ಮಧುವಿರೋಧಿಮನೋಜ ಕ್ಷೀರೋ-
ದಧಿಮಥನಸಮಯದಲುದಿಸಿ ನೆರೆ
ಕುಧರಜಾವಲ್ಲಭನ ಮಸ್ತಕಮಂದಿರದಿ ಮೆರೆವ।
ವಿಧು ತವಾಂಘ್ರಿಪಯೋಜಯುಗಳಕೆ
ಮಧುಪನಂದದಲೆರಗಲೆನ್ನನ-
ದಧಿಪ ವಂದಿಪೆನನುದಿನಂತಸ್ತಾಪ ಪರಿಹರಿಸೊ ॥ ೨೩ ॥

ಶ್ರೀವನರುಹಾಂಬಕನ ನೇತ್ರಗ-
ಳೇ ಮನೆಯೆನಿಸಿ ಸಜ್ಜನರಿಗೆ ಕ-
ರಾವಲಂಬನವೀವ ತೆರದಿ ಮಯೂಖ ವಿಸ್ತರಿಪ।
ಆ ವಿವಸ್ವಾನೆಂದೆನಿಸುವ ವಿ-
ಭಾವಸು ಅಹರ್ನಿಶಿಗಳಲಿ ಕೊಡ-
ಲೀ ವಸುಂಧರೆಯೊಳು ವಿಪಶ್ಚಿತರೊಡನೆ ಸುಜ್ಞಾನ ॥ ೨೪ ॥

ಲೋಕಮಾತೆಯ ಪಡೆದು ನೀ ಜಗ-
ದೇಕಪಾತ್ರನಿಗಿತ್ತ ಕಾರಣ
ಶ್ರೀಕುಮಾರಿಸಮೇತ ನೆಲೆಸಿದ ನಿನ್ನ ಮಂದಿರದಿ ।
ಆ ಕಮಲಭವಮುಖರು ಬಿಡದೆ ಪ-
ರಾಕೆನುತ ನಿಂದಿಹರೊ ಗುಣರ-
ತ್ನಾಕರನೆ ಬಣ್ಣಿಸಲಳವೆ ಕೊಡು ಎಮಗೆ ಸನ್ಮುದವ ॥ ೨೫ ॥

ಪಣೆಯೊಳೊಪ್ಪುವ ತಿಲಕ ತುಲಸೀ-
ಮಣಿಗಣಾನ್ವಿತಕಂಠ ಕರದಲಿ
ಕ್ವಣಿತವೀಣಾಸುಸ್ವರದಿ ಬಹುತಾಳಗತಿಗಳಲಿ ।
ಪ್ರಣವಪ್ರತಿಪಾದ್ಯನ ಗುಣಂಗಳ
ಕುಣಿಕುಣಿದು ಅತಿಸಂಭ್ರಮದಿ ಗಾ-
ಯನವ ಮಾಡುವ ದೇವಋಷಿನಾರದರಿಗಭಿನಮಿಪೆ ॥ ೨೬ ॥

ಆ ಸರಸ್ವತಿತೀರದಲಿ ಬಿ-
ನ್ನೈಸಲಾ ಮುನಿಗಳ ನುಡಿಗೆ ಜಡ-
ಜಾಸನಮಹೇಶಾಚ್ಯುತರ ಲೋಕಂಗಳಿಗೆ ಪೋಗಿ ।
ತಾ ಸಕಲಗುಣಗಳ ವಿಚಾರಿಸಿ
ಕೇಶವನೆ ಪರದೈವವೆಂದುಪ-
ದೇಶಿಸಿದ ಭೃಗುಮುನಿಪ ಕೊಡಲೆಮಗಖಿಳಪುರುಷಾರ್ಥ ॥ ೨೭ ॥

ಬಿಸರುಹಾಂಬಕನಾಜ್ಞೆಯಲಿ ಸುಮ-
ನಸಮುಖನು ತಾನೆನಿಸಿ ನಾನಾ-
ರಸಗಳುಳ್ಳ ಹವಿಸ್ಸುಗಳನವರವರಿಗೊಯ್ದೀವ ।
ವಸುಕುಲಾಧಿಪ ಯಜ್ಞಪುರುಷನ
ಅಸಮಬಲರೂಪಂಗಳಿಗೆ ವಂ-
ದಿಸುವೆ ಜ್ಞಾನ ಯಶಸ್ಸು ವಿದ್ಯೆ ಸುಬುದ್ಧಿ ಕೊಡಲೆಮಗೆ ॥ ೨೮ ॥

ತಾತನಪ್ಪಣೆಯಿಂದ ನೀ ಪ್ರ-
ಖ್ಯಾತಿಯುಳ್ಳರವತ್ತುಮಕ್ಕಳ
ಪ್ರೀತಿಯಿಂದಲಿ ಪಡೆದವರವರಿಗಿತ್ತು ಮನ್ನಿಸಿದೆ ।
ವೀತಿಹೋತ್ರನ ಸಮಳೆನಿಸುವ ಪ್ರ-
ಸೂತಿ ಜನನಿ ತ್ವದಂಘ್ರಿಕಮಲಕೆ
ನಾ ತುತಿಸುತಲೆ ಬಾಗುವೆಮ್ಮ ಕುಟುಂಬ ಸಲಹುವುದು ॥ ೨೯ ॥

ಶತಧೃತಿಯ ಸುತರೀರ್ವರುಳಿದ-
ಪ್ರತಿಮ ಸುತಪೋನಿಧಿಗಳಪರಾ-
ಜಿತನ ಸುಸಮಾಧಿಯೊಳೊಲಿಸಿ ಮೂರ್ಲೋಕದೊಳು ಮೆರೆವ।
ವ್ರತಿವರ ಮರೀಚ್ಯತ್ರಿಪುಲಹಾ
ಕ್ರತು ವಸಿಷ್ಠ ಪುಲಸ್ತ್ಯ ವೈವ-
ಸ್ವತನು ವಿಶ್ವಾಮಿತ್ರರಂಗಿರರಂಘ್ರಿಗೆರಗುವೆನು ॥ ೩೦ ॥

ದ್ವಾದಶಾದಿತ್ಯರೊಳು ಮೊದಲಿಗ-
ನಾದ ಮಿತ್ರ ಪ್ರವಹಮಾನಿನಿ-
ಯಾದ ಪ್ರಾವಹಿ ನಿಋತಿ ನಿರ್ಜರಗುರುಮಹಿಳೆ ತಾರ।
ಈ ದಿವೌಕಸರನುದಿನಾಧಿ-
ವ್ಯಾಧಿ ಉಪಟಳವಳಿದು ವಿಬುಧರಿ-
ಗಾದರದಿ ಕೊಡಲಖಿಳಮಂಗಳವಾವಕಾಲದಲಿ ॥ ೩೧ ॥

ಮಾನನಿಧಿಗಳೆನಿಸುವ ವಿಷ್ವ-
ಕ್ಸೇನಧನಪಗಜಾನನರಿಗೆ ಸ-
ಮಾನರೆಂಭತ್ತೈದು ಶೇಷಶತಸ್ಥದೇವಗಣ-।
ಕಾ ನಮಿಸುವೆನು ಬಿಡದೆ ಮಿಥ್ಯಾ-
ಜ್ಞಾನ ಕಳೆದು ಸುಬೋಧವಿತ್ತು ಸ-
ದಾನುರಾಗದಲೆಮ್ಮ ಪರಿಪಾಲಿಸಲೆನುತ ಮನಸಾ ॥ ೩೨ ॥

ಭೂತಮರುತನವಾಂತರಭಿಮಾ-
ನೀ ತಪಸ್ವಿ ಮರೀಚಿಮುನಿ ಪುರು-
ಹೂತನಂದನಪಾದಮಾನಿಜಯಂತರೆಮಗೊಲಿದು।
ಕಾತರವ ಪುಟ್ಟಿಸದೆ ವಿಷಯದಿ
ವೀತಭಯನ ಪದಾಬ್ಜದಲಿ ವಿಪ-
ರೀತಬುದ್ಧಿಯನೀಯದೆ ಸದಾ ಪಾಲಿಸಲಿ ಎಮ್ಮ ॥ ೩೩ ॥

ಓದಿಸುವ ಗುರುಗಳನು ಜರಿದು ಸ-
ಹೋದರರಿಗುಪದೇಶಿಸಿದ ಮಹ-
ದಾದಿಕಾರಣ ಸರ್ವಗುಣಸಂಪೂರ್ಣ ಹರಿಯೆಂದು।
ವಾದಿಸುವ ತತ್ವತಿಯ ತೋರೆಂ-
ದಾ ದನುಜ ಬೆಸಗೊಳಲು ಸ್ತಂಭದಿ
ಶ್ರೀದನಾಕ್ಷಣ ತೋರಿಸಿದ ಪ್ರಹ್ಲಾದ ಸಲಹೆಮ್ಮ ॥ ೩೪ ॥

ಬಲಿಮೊದಲು ಸಪ್ತೇಂದ್ರರಿವರಿಗೆ
ಕಲಿತಕರ್ಮಜದಿವಿಜರೆಂಬರು
ಉಳಿದ ಏಕಾದಶಮನುಗಳು ಉಚಥ್ಯ ಚ್ಯವನಮುಖ।
ಕುಲಋಷಿಗಳೆಂಭತ್ತು ಹೈಹಯ-
ನಿಳೆಯ ಕಂಪನಗೈದ ಪೃಥು ಮಂ-
ಗಳ ಪರೀಕ್ಷಿತ ನಹುಷ ನಾಭಿ ಯಯಾತಿ ಶಶಿಬಿಂದು ॥ ೩೫ ॥

ಶತಕಸಂಕೇತುಳ್ಳ ಪ್ರೀಯ-
ವ್ರತ ಭರತ ಮಾಂಧಾತ ಪುಣ್ಯಾ-
ಶ್ರಿತರು ಜಯವಿಜಯಾದಿಗಳು ಗಂಧರ್ವರೆಂಟುಜನ।
ಹುತವಹಜ ಪಾವಕ ಸನಾತನ
ಪಿತೃಗಳೇಳ್ವರು ಚಿತ್ರಗುಪ್ತರು
ಪ್ರತಿದಿನದಿ ಪಾಲಿಸಲಿ ತಮ್ಮವನೆಂದು ಎಮಗೊಲಿದು ॥ ೩೬ ॥

ವಾಸವಾಲಯಶಿಲ್ಪಿ ವಿಮಲಜ-
ಲಾಶಯಗಳೊಳು ರಮಿಪ ಉರ್ವಶಿ
ಭೇಶರವಿಗಳ ರಿಪುಗಳೆನಿಸುವ ರಾಹುಕೇತುಗಳು।
ಶ್ರೀಶಪದಪಂಥಾನ ಧೂಮಾ-
ರ್ಚೀಶದಿವಿಜರು ಕರ್ಮಜರಿಗೆ ಸ-
ದಾ ಸಮಾನ ದಿವೌಕಸರು ಕೊಡಲೆಮಗೆ ಮಂಗಳವ ॥ ೩೭ ॥

ದ್ಯುನದಿ ಶ್ಯಾಮಲ ಸಂಜ್ಞ ರೋಹಿಣಿ
ಘನಪ ಪರ್ಜನ್ಯಾನಿರುದ್ಧನ
ವನಿತೆ ಬ್ರಹ್ಮಾಂಡಾಭಿಮಾನಿವಿರಾಟದೇವಿಯರ।
ನೆನೆವೆ ನಾ ನಲವಿಂದ ದೇವಾ-
ನನಮಹಿಳೆ ಸ್ವಾಹಾಖ್ಯರಾಲೋ-
ಚನೆ ಕೊಡಲಿ ನಿರ್ವಿಘ್ನದಿಂ ಭಗವದ್ಗುಣಂಗಳಲಿ ॥ ೩೮ ॥

ವಿಧಿಪಿತನ ಪಾದಾಂಬುಜಗಳಿಗೆ
ಮಧುಪನಂತೆ ವಿರಾಜಿಪಾಮಲ
ಉದಕಗಳಿಗೆ ಸದಾಭಿಮಾನಿಯು ಎಂದೆನಿಸಿಕೊಂಬ।
ಬುಧಗೆ ನಾ ವಂದಿಸುವೆ ಸನ್ಮೋ-
ದದಿ ನಿರಂತರ ಒಲಿದು ಎಮಗ-
ಭ್ಯುದಯ ಪಾಲಿಸಲೆಂದು ಪರಮೋತ್ಸಹದಲನುದಿನದಿ ॥ ೩೯ ॥

ಶ್ರೀವಿರಿಂಚಾದ್ಯರ ಮನಕೆ ನಿಲು-
ಕಾವಕಾಲಕೆ ಜನನರಹಿತನ
ತಾ ಒಲಿಸಿ ಮಗನೆಂದು ಮುದ್ದಿಸಿ ಲೀಲೆಗಳ ನೋಳ್ಪ।
ದೇವಕಿಗೆ ವಂದಿಪೆ ಯಶೋದಾ-
ದೇವಿಗಾನಮಿಸುವೆನು ಬಿಡದೆ ಕೃ-
ಪಾವಲೋಕನದಿಂದ ಸಲಹುವುದೆಮ್ಮ ಸಂತತಿಯ ॥ ೪೦ ॥

ಪಾಮರರನ ಪವಿತ್ರಗೈಸುವ
ಶ್ರೀಮುಕುಂದನ ವಿಮಲಮಂಗಳ-
ನಾಮಗಳಿಗಭಿಮಾನಿಯಾದ ಉಷಾಖ್ಯದೇವಿಯರು।
ಭೂಮಿಯೊಳಗುಳ್ಳಖಿಳಸಜ್ಜನ-
ರಾಮಯಾದಿಗಳಳಿದು ಸಲಹಲಿ
ಆ ಮರುತ್ವಾನ್ಸ್ವನೆಯ ವೈದ್ಯರ ರಮಣ ಪ್ರತಿದಿನದಿ ॥ ೪೧ ॥

ವನಧಿವಸನೆ ವರಾದ್ರಿನಿಚಯ-
ಸ್ತನವಿರಾಜಿತೆ ಚೇತನಾಚೇ-
ತನವಿಧಾರಕೆ ಗಂಧರಸರೂಪಾದಿಗುಣವಪುಷೇ।
ಮುನಿಕುಲೋತ್ತಮಕಶ್ಯಪನ ನಿಜ
ತನುಜೆ ನಿನಗಾನಮಿಪೆ ಎನ್ನವ-
ಗುಣಗಳೆಣಿಸದೆ ಪಾಲಿಪುದು ಪರಮಾತ್ಮನರ್ಧಾಂಗಿ ॥ ೪೨ ॥

ಪುರಟಲೋಚನ ನಿನ್ನ ಕದ್ದೊ-
ಯ್ದಿರಲು ಪ್ರಾರ್ಥಿಸೆ ದೇವತೆಗಳು-
ತ್ತರವ ಲಾಲಿಸಿ ತಂದ ವರಹಾರೂಪ ತಾನಾಗಿ।
ಧರಣಿ ಜನನಿಯೆ ತ್ವತ್ಪದಾಬ್ಜಕೆ
ಎರಗಿ ಬಿನ್ನೈಸುವೆನು ಪಾದ-
ಸ್ಪರಿಶ ಮೊದಲಾದಖಿಳದೋಷಗಳೆಣಿಸದಿರು ಎಂದು ॥ ೪೩ ॥

ಹರಿಗುರುಗಳರ್ಚಿಸದ ಪಾಪಾ-
ತ್ಮರನ ಶಿಕ್ಷಿಸಲೋಸುಗ ಶನ್ಯೈ-
ಶ್ಚರನೆನಿಸಿ ದುಷ್ಫಲಗಳೀವೆ ನಿರಂತರವು ಬಿಡದೆ।
ತರಣಿನಂದನ ನಿನ್ನ ಪಾದಾಂ-
ಬುರುಹಗಳಿಗಾನಮಿಪೆ ಬಹುದು-
ಸ್ತರಭವಾರ್ಣವಮಗ್ನನಾದೆನ್ನುದ್ಧರಿಸಬೇಕು ॥ ೪೪ ॥

ನಿರತಿಶಯಸುಜ್ಞಾನಪೂರ್ವಕ
ವಿರಚಿಸುವ ನಿಷ್ಕಾಮಕರ್ಮಗ-
ಳರಿತು ತತ್ತತ್ಕಾಲದಲಿ ತಜ್ಜನ್ಯಫಲರಸವ।
ಹರಿಯ ನೇಮದಲುಣಿಸಿ ಬಹುಜೀ-
ವರಿಗೆ ಕರ್ಮಪನೆನಿಪ ಗುರುಪು-
ಷ್ಕರನು ಸತ್ಕರ್ಮಂಗಳಲಿ ನಿರ್ವಿಘ್ನತೆಯ ಕೊಡಲಿ ॥ ೪೫ ॥

ಶ್ರೀನಿವಾಸನ ಪರಮಕಾರು-
ಣ್ಯಾನಿವಾಸಸ್ಥಾನರೆನಿಪ ಕೃ-
ಶಾನುಜರು ಸಾಹಸ್ರಷೋಡಶಶತರು ಶ್ರೀಕೃಷ್ಣ- ।
ಮಾನಿನಿಯರೆಪ್ಪತ್ತು ಯಕ್ಷರು
ದಾನವರು ಮೂವತ್ತು ಚಾರಣ-
ಜಾನಜಾಮರರಪ್ಸರರು ಗಂಧರ್ವರಿಗೆ ನಮಿಪೆ ॥ ೪೬ ॥

ಆ ಯಮುನೆಯೊಳು ಸಾದರದಿ ಕಾ-
ತ್ಯಾಯನೀವ್ರತ ಧರಿಸಿ ಕೆಲರು ದ-
ರಾಯುಧನೆ ಪತಿಯೆನಿಸಿ ಕೆಲವರು ಜಾರತನದಲ್ಲಿ।
ವಾಯುಪಿತನೊಲಿಸಿದರು ಈರ್ಬಗೆ
ತೋಯಜಾಕ್ಷಿಯರವರ ಪಾದಕೆ
ನಾ ಯೆರಗುವೆ ಮನೋರಥಂಗಳ ಸಲಿಸಲನುದಿನವು ॥ ೪೭ ॥

ಕಿನ್ನರರು ಗುಹ್ಯಕರು ರಾಕ್ಷಸ-
ಪನ್ನಗರು ಪಿತೃಗಳು ಸುಸಿದ್ಧರು
ಸನ್ನುತಾಜಾನಜರು ಸಮರಿವರಮರಯೋನಿಜರು।
ಇನ್ನವರ ಗುಣವೆಂತು ಬಣ್ಣಿಸ-
ಲೆನ್ನಳವೆ ಕರುಣದಲಿ ಪರಮಾ-
ಪನ್ನಜನರಿಗೆ ಕೊಡಲಿ ಸನ್ಮುದ ಸುಪ್ರತಾಪಗಳ ॥ ೪೮ ॥

ನೂರುಮುನಿಗಳ ಉಳಿದು ಮೇಲಣ
ನೂರುಕೋಟಿ ತಪೋಧನರ ಪಾ-
ದಾರವಿಂದಕೆ ಮುಗಿವೆ ಕರಗಳನುದ್ಧರಿಸಲೆಂದು।
ಮೂರುಸಪ್ತಶತಾಹ್ವಯರ ತೊರೆ-
ದೀ ಋಷಿಗಳಾನಂತರದಲಿಹ
ಭೂರಿಪಿತೃಗಳು ಕೊಡಲಿ ಎಮಗೆ ಸದಾ ಸುಮಂಗಳವ ॥ ೪೯ ॥

ಪಾವನಕೆ ಪಾವನನೆನಿಸುವ ರ-
ಮಾವಿನೋದನ ಗುಣಗಣಂಗಳ
ಸಾವಧಾನದಲೇಕಮಾನಸರಾಗಿ ಸುಸ್ವರದಿ।
ಆ ವಿಬುಧಪತಿಸಭೆಯೊಳಗೆ ನಾ-
ನಾವಿಲಾಸದಿ ಪಾಡಿ ಸುಖಿಸುವ
ದೇವಗಂಧರ್ವರು ಕೊಡಲಿ ಎಮಗಖಿಳಪುರುಷಾರ್ಥ ॥ ೫೦ ॥

ಭುವನಪಾವನವೆನಿಪ ಲಕ್ಷ್ಮೀ-
ಧವನ ಮಂಗಳ ದಿವ್ಯನಾಮ-
ಸ್ತವನಗೈವ ಮನುಷ್ಯಗಂಧರ್ವರಿಗೆ ವಂದಿಸುವೆ।
ಪ್ರವರಭೂಭುಜರುಳಿದು ಮಧ್ಯಮ-
ಕುವಲಯಪರೆಂದೆನಿಸಿಕೊಂಬರ
ದಿವಸದಿವಸಂಗಳಲಿ ನೆನೆವೆನು ಕರಣಶುದ್ಧಿಯಲಿ ॥ ೫೧ ॥

ಶ್ರೀಮುಕುಂದನ  ಮೂರ್ತಿಗಳ ಸೌ-
ದಾಮಿನಿಯವೋಲ್ ಹೃದಯವಾರಿಜ-
ವ್ಯೋಮಮಂಡಲಮಧ್ಯದಲಿ ಕಾಣುತಲಿ ಮೋದಿಸುವ।
ಆ ಮನುಷ್ಯೋತ್ತಮರ ಪದಯುಗ-
ತಾಮರಸಗಳಿಗೆರಗುವೆ ಸದಾ
ಕಾಮಿತಾರ್ಥಗಳಿತ್ತು  ಸಲಹಲಿ ಪ್ರಣತಜನತತಿಯ ॥ ೫೨ ॥

ಈ ಮಹೀಮಂಡಲದೊಳಿಹ ಗುರು
ಶ್ರೀಮದಾಚಾರ್ಯರ ಮತಾನುಗ-
ರಾ ಮಹಾವೈಷ್ಣವರ ವಿಷ್ಣುಪದಾಬ್ಜಮಧುಕರರ।
ಸ್ತೋಮಕಾನಮಿಸುವೆನವರವರ
ನಾಮಗಳ ಪೇಳಳವೆ ಬಹುವಿಧ
ಯಾಮಯಾಮಂಗಳಲಿ ಬೋಧಿಸಲೆನಗೆ ಸನ್ಮತಿಯ ॥ ೫೩ ॥

ಮಾರನಯ್ಯನ ಕರುಣಪಾರಾ-
ವಾರಮುಖ್ಯಸುಪಾತ್ರರೆನಿಪ ಸ-
ರೋರುಹಾಸನ ವಾಣಿ ರುದ್ರೇಂದ್ರಾದಿ ಸುರನಿಕರ।
ತಾರತಮ್ಯಾತ್ಮಕಸುಪದ್ಯಗ-
ಳಾರು ಪಠಿಸುವರಾ ಜನರಿಗೆ ರ-
ಮಾರಮಣ ಪೂರೈಸಲೀಪ್ಸಿತ ಸರ್ವಕಾಲದಲಿ ॥ ೫೪ ॥

ಮೂರುಕಾಲಂಗಳಲಿ ತುತಿಸೆ ಶ-
ರೀರವಾಙ್ಮನಶುದ್ಧಿ ಮಾಳ್ಪದು
ದೂರಗೈಸುವುದಖಿಳಪಾಪಸಮೂಹ ಪ್ರತಿದಿನದಿ।
ಚೋರಭಯ ರಾಜಭಯ ನಕ್ರಚ-
ಮೂರುಶಸ್ತ್ರಜಲಾಗ್ನಿಭೂತಮ-
ಹೋರಗಜ್ವರನರಕಭಯ ಸಂಭವಿಸದೆಂದೆಂದು ॥ ೫೫ ॥

ಜಯ ಜಯತು ತ್ರಿಜಗದ್ವಿಲಕ್ಷಣ
ಜಯ ಜಯತು ಜಗದೇಕಕಾರಣ
ಜಯ ಜಯತು ಜಾನಕಿರಮಣ ನಿರ್ಗತಜರಾಮರಣ।
ಜಯ ಜಯತು ಜಾಹ್ನವಿಜನಕ ಜಯ
ಜಯತು ದೈತ್ಯಕುಲಾಂತಕ ಭವಾ-
ಮಯಹರ ಜಗನ್ನಾಥವಿಟ್ಠಲ ಪಾಹಿ ಮಾಂ ಸತತ ॥ ೫೬ ॥

★★★★★

## ಪರಿಶಿಷ್ಟ- ೧೮

### ತಾರತಮ್ಯ(ನಮಸ್ಕಾರಕ್ರಮ)

ವಿಷ್ಣು ಸರ್ವೋತ್ತಮ ಜೀವಜಡಾತ್ಮಕಜಗದತ್ಯಂತಭಿನ್ನ ಸಚ್ಚಿದಾನಂದಸ್ವರೂಪ-ಮುಕ್ತಾಮುಕ್ತಸುರಗಣಸೇವಿತನಾದ ಲಕ್ಷ್ಮೀನಾರಾಯಣಗೆ ಅನಂತಾನಂತ ನಮಸ್ಕಾರಾ ॥ ೧ ॥

ಆತನ ಪತ್ನಿ ಜ್ಞಾನಾನಂದಸ್ವರೂಪಳಾದ ಅನಂತಾನಂತಗುಣದಿಂದ ನೀಚಳಾದ ಮಹಾಲಕ್ಷ್ಮಿದೇವೇರಿಗೆ ನಮಸ್ಕಾರಾ ॥ ೨ ॥

ಮಹಾಲಕ್ಷ್ಮೀಪುತ್ರರಾದ ಜಗದ್ಗುರುಗಳಾದ ಬ್ರಹ್ಮವಾಯುಗಳಿಗೆ ಅನಂತಾನಂತ ನಮಸ್ಕಾರಾ ॥ ೩ ॥

ವೇದಾಭಿಮಾನಿಗಳಾದ ಬ್ರಹ್ಮವಾಯುಗಳಿಗೆ ಸ್ತ್ರೀಯರಾದ ಸರಸ್ವತಿ ಭಾರತೇರಿಗೆ ಅನಂತಾನಂತ ಸಮಸ್ಕಾರಾ ॥ ೪ ॥

ಬ್ರಹ್ಮವಾಯುಗಳಿಗೆ ಮಕ್ಕಳಾದ ಗರುಡಶೇಷರುದ್ರರಿಗೆ ಅನಂತಾನಂತ ನಮಸ್ಕಾರ ॥ ೫ ॥

ಶ್ರೀಕೃಷ್ಣಪತ್ನೇರಾದ ಜಾಂಬವತೀ ಕಾಳಿಂದೀ ಭದ್ರಾ ನೀಲಾ ಮಿತ್ರವಿಂದಾ ಲಕ್ಷಣಾ ಈ ಆರು ಮಂದಿಗೆ ಅನಂತಾನಂತ ನಮಸ್ಕಾರ ॥ ೬ ॥

ಗರುಡಶೇಷರುದ್ರರಿಗೆ ಹೆಂಡರಾದ ಸೌಪರ್ಣೀ ವಾರುಣೀ ಪಾರ್ವತೇರಿಗೆ ಅನಂತಾನಂತ ಸಮಸ್ಕಾರಾ ॥ ೭ ॥

ಸ್ವರ್ಗಾಧಿಪತಿಯಾದಂಥ ದೇವೇಂದ್ರಗೆ ಕಾಮರಿಗೆ ಅನಂತಾನಂತ ನಮಸ್ಕಾರಾ ॥ ೮ ॥

ಅಹಂಕಾರಿಕ ಪ್ರಾಣದೇವರಿಗೆ ಅನಂತಾನಂತ ನಮಸ್ಕಾರಾ ॥ ೯ ॥

ಇಂದ್ರಪತ್ನೀ ಶಚೀದೇವಿಗೆ ಕಾಮಪತ್ನೀ ರತೀದೇವಿಗೆ ಸ್ವಾಯಂಭುವಮನುವಿಗೆ ಬೃಹಸ್ಪತ್ಯಾಚಾರ್ಯರಿಗೆ ಕಾಮಪುತ್ರಅನಿರುದ್ಧಗೆದಕ್ಷಪ್ರಜೇಶ್ವರಗೆ ಈ ಆರು ಮಂದಿಗೆ ಅನಂತಾನಂತ ನಮಸ್ಕಾರಾ ॥ ೧೦ ॥

ಕೋಣಾಧಿಪತಿಯಾದ ಪ್ರವಹವಾಯುದೇವರಿಗೆ ಅನಂತಾನಂತ ನಮಸ್ಕಾರ ॥ ೧೧ ॥

ದೇವರ ಕಣ್ಣುಗಳಿಂದ ಹುಟ್ಟಿದಂಥಾ ಸೂರ್ಯದೇವರಿಗೆ ಮನಸ್ಸಿನಿಂದ ಹುಟ್ಟಿದಂಥ ಚಂದ್ರದೇವರಿಗೆ ಸ್ತನಗಳಿಂದಾ ಹುಟ್ಟಿದಂಥಾ ಧರ್ಮರಾಯಗೆ ಸ್ವಾಯಂಭುವಪತ್ನಿ ಶತರೂಪಾದೇವಿಗೆ ಅನಂತಾನಂತ ನಮಸ್ಕಾರ ॥ ೧೨ ॥

ದೇವರ ಕುಕ್ಷಿಯಿಂದ ಹುಟ್ಟಿದಂಥಾ ಉದಕಾಭಿಮಾನಿಯಾದ ಸಮುದ್ರನಾಥಗೆ ಅನಂತಾನಂತ ನಮಸ್ಕಾರಾ ॥ ೧೩ ॥

ಬ್ರಹ್ಮದೇವರ ಅಂಕೋದ್ಭವರಾದ ದೇವ ಋಷ್ಯುತ್ತಮರಾದ ನಾರದರಿಗೆ ಅನಂತಾನಂತ ನಮಸ್ಕಾರಾ ॥ ೧೪ ॥

ಹರಿಸರ್ವೋತ್ತಮತ್ವ ಸ್ಥಾಪಿಸಿದಂಥ ಭೃಗುಮುನಿಗೆ ದೇವಮುಖನಾದ ಅಗ್ನಿದೇವರಿಗೆ ದಕ್ಷಪತ್ನಿಪ್ರಸೂತಿದೇವಿಗೆ ಅನಂತಾನಂತ ನಮಸ್ಕಾರಾ ॥ ೧೫ ॥

ಗಾಧಿಯ ಮಗನಾದ ವಿಶ್ವಾಮಿತ್ರಗೆ ಬ್ರಹ್ಮಪುತ್ರರಾದ ಮರೀಚಿ ಅತ್ರಿ ಅಂಗೀರಸ ಪುಲಸ್ತ್ಯ ಪುಲಹ ಕ್ರತು ವಸಿಷ್ಠಋಷಿಗಳಿಗೆ ವೈವಸ್ವತಮನುವಿಗೆ ಅನಂತಾನಂತ ನಮಸ್ಕಾರಾ ॥ ೧೬ ॥

ಮಿತ್ರನಾಮಕಸೂರ್ಯಗೆ ಗುರುಪತ್ನಿ ತಾರಾದೇವಿಗೆ ಕೋಣಾಧಿಪತಿ ನಿಋಋತಿಗೆ ಪ್ರವಹಪತ್ನಿಪ್ರಾವಹೀದೇವಿಗೆ ಅನಂತಾನಂತ ನಮಸ್ಕಾರಾ ॥ ೧೭ ॥

ದೇವತಾಸೇನಾಧಿಪತಿ ವಿಷ್ವಕ್ಸೇನಗೆ ಅಶ್ವಿನೀದೇವತೆಗಳಿಗೆ ಗಣಪ ಧನೇಶ್ವರನಾದ ಕುಬೇರಗೆ ಅನಂತಾನಂತ ನಮಸ್ಕಾರಾ ॥ ೧೮ ॥

ಶೇಷಶತಸ್ಥರಾದ ಏಕಾದಶಮನುಗಳಿಗೆ ಚ್ಯವನಪುತ್ರಗೆ ಉಚಥ್ಯ ಋಷಿಗಳಿಗೆ ಶುಕ್ರಾ-ಚಾರ್ಯರಿಗೆ ಅನಂತಾನಂತ ನಮಸ್ಕಾರಾ ॥ ೧೯ ॥

ಕಾರ್ತವೀರ್ಯ ಶಶಬಿಂದು ಮಾಂಧಾತ ಪ್ರಿಯವ್ರತ ಪರೀಕ್ಷಿತ ಅಂಬರೀಷಾದಿ ಕರ್ಮಜದೇವತೆಗಳಿಗೆ ಅನಂತಾನಂತ ನಮಸ್ಕಾರಾ ॥ ೨೦ ॥

ಭಾಗೀರಥಿಗೆ ಮೇಘಾಭಿಮಾನಿಪರ್ಜನ್ಯಗೆ ಸೂರ್ಯಪತ್ನಿ ಸಂಜ್ಞಾದೇವಿಗೆ ಶಶಿಪತ್ನಿ ರೋಹಿಣಿಗೆ ಯಮಪತ್ನಿ ಶ್ಯಾಮಲಾ ಅನಿರುದ್ಧಪತ್ನಿ ವಿರಾಟದೇವಿಗೆ ಅನಂತಾನಂತ ನಮಸ್ಕಾರಾ ॥ ೨೧ ॥

ತರುವಾಯ ಅನಾಖ್ಯಾತದೇವತೆಗಳಿಗೆ ಅನಂತಾನಂತ ನಮಸ್ಕಾರಾ ॥ ೨೨ ॥

ಶತೋನಶತಕೋಟಿ ಋಷಿಗಳಿಗೆ ತಥಾ ಅಗ್ನಿಜಾಯಾ ಸ್ವಾಹಾದೇವಿಗೆ ॥ ೨೩ ॥

ಜಲಾವಾಂತರಾಭಿಮಾನಿ ಬುಧಗೆ ಅನಂತಾನಂತ ನಮಸ್ಕಾರಾ ॥ ೨೪ ॥

ನಾಮಾಭಿಮಾನಿ ಉಷಾದೇವಿಗೆ ಅನಂತಾನಂತ ನಮಸ್ಕಾರಾ ॥ ೨೫ ॥

ಭೂಮ್ಯಾಭಿಮಾನಿ ಶನೈಶ್ಚರಗೆ ಅನಂತಾನಂತ ನಮಸ್ಕಾರಾ ॥ ೨೬ ॥

ಕರ್ಮಾಭಿಮಾನಿ ಪುಷ್ಕರಗೆ ಅನಂತಾನಂತ ನಮಸ್ಕಾರಾ ॥ ೨೭ ॥

(ಇಲ್ಲಿಯ ಪರ್ಯಂತ ತತ್ತ್ವಾಭಿಮಾನಿಗಳು) ತರುವಾಯ ತಥಾ ಆಜಾನದೇವತೆ-ಗಳಿಗೆ ತುಂಬುರು ಮೊದಲಾದ ನೂರು ಗಂಧರ್ವರಿಗೆ ಊರ್ವಶೀ ಮೊದಲಾದ ನೂರು ಅಪ್ಸರಸ್ತ್ರೀಯರಿಗೆ ಎಂಭತ್ತುಋಷಿಗಳಿಗೆ ನಲ್ವತ್ತೇಳು ಅಗ್ನಿಪುತ್ರರಿಗೆ - ಹದಿನಾರುಸಹಸ್ರ ಕೃಷ್ಣಪತ್ನೇರಿಗೆ - ಕೃಷ್ಣಾಂಗಸಂಗಿಗಳಾದ ಗೋಪಿಕಾಸ್ತ್ರೀಯರಿಗೆ - ತಥಾ ಚಿರಪಿತೃಗಳಿಗೆ

ತಥಾ ದೇವಗಂಧರ್ವರ್ವರಿಗೆ - ತರುವಾಯ ಮನುಷ್ಯಗಂಧರ್ವರ್ವರಿಗೆ ತರುವಾಯ ಕ್ಷಿತಿಪರಿಗೆ - ತರುವಾಯ ಮನುಷ್ಯೋತ್ತಮರಿಗೆ ತರುವಾಯ ಮನುಷ್ಯೋತ್ತಮರಲ್ಲಿ ಮಧ್ಯಮರಿಗೆ - ಮನುಷ್ಯೋತ್ತಮರಲ್ಲಿ ಅಧಮರಿಗೆ ತಥಾ ಮನುಷ್ಯಮಧ್ಯಮೋತ್ತಮರಿಗೆ ಅನಂತಾನಂತ ನಮಸ್ಕಾರಾ ॥ ೨೮ ॥

ಅಸ್ಮದ್ಗುರುವರಂತರ್ಯಾಮಿ ಪರಮಗುರುಗಳಾಂತರ್ಯಾಮಿ ತತ್ತ್ವದೇವತೆಗಳಂತ-ರ್ಯಾಮಿ ಉಮಾಮಹೇಶ್ವರಾಂತರ್ಯಾಮಿ ಶ್ರೀಮದ್ಧನುಮಭೀಮಮಧ್ವಾತ್ಮಕ ಭಾರತೀರಮಣ ಮುಖ್ಯಪ್ರಾಣಾಂತರ್ಯಾಮಿ ಶ್ರೀಭೂದುರ್ಗಾರಮಣ ರಾಮ-ಕೃಷ್ಣವೇದವ್ಯಾಸಾದಿಅನಂತರೂಪಾತ್ಮಕ ಸಚ್ಚಿದಾನಂದಾತ್ಮಕ ಜಗನ್ನಾಥವಿಠಲಾತ್ಮಕ ಶ್ರೀನೃಸಿಂಹಃ ಪ್ರೀತೋ ಭವತು ॥ ೨೯ ॥

॥ ಶ್ರೀಕೃಷ್ಣಾರ್ಪಣಮಸ್ತು ॥

★★★★★

## ಕನ್ನಡ ತಾರತಮ್ಯ (ಗೂಢಕರ್ತೃಕ)

ಅನಂತಾನಂತಗುಣಪೂರ್ಣ ಶ್ರೀಹರಿ ॥ ೧ ॥

ಮಹಾಲಕ್ಷ್ಮೀದೇವೇರು ಶ್ರೀಹರಿಕಿಂತ ಅನಂತಗುಣ ಕಡಿಮೆ ॥ ೨ ॥

ಬ್ರಹ್ಮದೇವರು ವಾಯುದೇವರು ಲಕ್ಷ್ಮೀದೇವೇರಕಿಂತ ಕೋಟಿಗುಣ ಕಡಿಮೆ ॥ ೩ ॥

ಸರಸ್ವತೀಭಾರತೀದೇವೇರು ತಮ್ಮ ಪತಿಗಳಕಿಂತಾ ನೂರು ಗುಣ ಕಡಿಮೆ ॥ ೪ ॥

ಗರುಡಶೇಷರುದ್ರರು ಭಾರತೀದೇವೇರಕಿಂತಾ ನೂರು ಗುಣ ಕಡಿಮೆ ॥ ೫ ॥

ಜಾಂಬವತೀ ಮೊದಲುಮಾಡಿ ಷಣ್ಮಹಿಷೇರು ರುದ್ರದೇವರಕಿಂತಾ ಐದು ಗುಣ ಕಡಿಮೆ ॥ ೬ ॥

ಸೌಪರ್ಣೀವಾರುಣೀಪಾರ್ವತೀ ಷಣ್ಮಹಿಷೇರಕಿಂತ ಎರಡು ಗುಣ ಕಡಿಮೆ ॥ ೭ ॥

ಇಂದ್ರಕಾಮರು ಪಾರ್ವತೀಕಿಂತ ಹತ್ತುಗುಣ ಕಡಿಮೆ ॥ ೮ ॥

ಅಹಂಕಾರಿಕಪ್ರಾಣಾ ಇಂದ್ರದೇವರಕಿಂತಾ ಹತ್ತುಗುಣ ಕಡಿಮೆ ॥ ೯ ॥

ಅನಿರುದ್ಧ ಮೊದಲುಮಾಡಿ ಆರುಮಂದಿ ಅಹಂಕಾರಿಕಪ್ರಾಣನಕಿಂತಾ ಹತ್ತು ಗುಣ ಕಡಿಮೆ ॥ ೧೦ ॥

ಪ್ರವಹವಾಯು ಅನಿರುದ್ಧಾದಿಗಳಕಿಂತಾ ಐದು ಗುಣ ಕಡಿಮೆ ॥ ೧೧ ॥

ಯಮ ಮೊದಲುಮಾಡಿ ನಾಲ್ಕು ಮಂದಿ ಪ್ರವಹವಾಯುನಕಿಂತಾ ಎರಡು ಗುಣ ಕಡಿಮೆ ॥ ೧೨ ॥

ವರುಣ ಯಮನಿಕಿಂತಾ ಒಂದೂವರೆ ಪಾದ ಕಡಿಮೆ ॥ ೧೩ ॥

ನಾರದರು ವರುಣನಿಕಿಂತ ಕಿಂಚಿತ್ ಕಡಿಮೆ ॥ ೧೪ ॥

ಭೃಗುಋಷಿ ಮೊದಲುಮಾಡಿ ಮೂರು ಮಂದಿ ನಾರದರಕಿಂತಾ ಕಿಂಚಿತ್ ಕಡಿಮೆ ॥ ೧೫ ॥

ವಿಶ್ವಾಮಿತ್ರ ಮೊದಲುಮಾಡಿ ಒಂಭತ್ತುಮಂದಿ ಕಿಂಚಿತ್ ಕಡಿಮೆ ॥ ೧೬ ॥

ಮಿತ್ರ ಮೊದಲುಮಾಡಿ ನಾಲ್ಕು ಮಂದಿ ಕಿಂಚಿತ್ ಕಡಿಮೆ ॥ ೧೭ ॥

ವಿಷ್ವಕ್ಸೇನಾದಿಗಳು ಕಿಂಚಿತ್ ಕಡಿಮೆ ॥ ೧೮ ॥

ಕರ್ಮಜದೇವತೆಗಳು ಸ್ವಲ್ಪ ಕಡಿಮೆ ॥ ೧೯ ॥

ಗಂಗಾದೇವಿ ಮದಲುಮಾಡಿ ಆರುಮಂದಿ ಸ್ವಲ್ಪ ಕಡಿಮೆ ॥ ೨೦ ॥

ಕೂರ್ಮಾದಿ ಅನಾಖ್ಯಾತ ದೇವತೆಗಳು ಸ್ವಲ್ಪ ಕಡಿಮೆ ॥ ೨೧ ॥

ಸ್ವಾಹಾದೇವೀ ಸ್ವಲ್ಪ ಕಡಿಮೆ ॥ ೨೨ ॥

ಬುಧಾ ಸ್ವಲ್ಪ ಕಡಿಮೆ ॥ ೨೩ ॥

ಅಶ್ವಿನೀ ದೇವತೆಗಳ ಭಾರ್ಯಳಾದ ಉಷಾದೇವಿ ಸ್ವಲ್ಪ ಕಡಿಮೆ ॥ ೨೪ ॥
ಶನೈಶ್ಚರ ಸ್ವಲ್ಪ ಕಡಿಮೆ ॥ ೨೫ ॥
ಪುಷ್ಕರ ಸ್ವಲ್ಪ ಕಡಿಮೆ ॥ ೨೬ ॥
ಆಜಾನಜದೇವತೆಗಳು ನೂರು ಗುಣ ಕಡಿಮೆ ॥ ೨೭ ॥
ಋಷಿಗಳು ನೂರುಗುಣ ಕಡಿಮೆ ॥ ೨೮ ॥
ಚಿರಪಿತೃಗಳು ನೂರುಗುಣ ಕಡಿಮೆ ॥ ೨೯ ॥
ದೇವಗಂಧರ್ವರು ನೂರು ಗುಣ ಕಡಿಮೆ ॥ ೩೦ ॥
ಮನುಷ್ಯಗಂಧರ್ವರು ನೂರುಗುಣ ಕಡಿಮೆ ॥ ೩೧ ॥
ಅರಸರುಗಳು ನೂರು ಗುಣ ಕಡಿಮೆ ॥ ೩೨ ॥
ಮನುಷ್ಯೋತ್ತಮರು ನೂರು ಗುಣ ಕಡಿಮೆ ॥ ೩೩ ॥
ಪಶುಪಕ್ಷಿಕ್ರಿಮಿಕೀಟತೃಣಾದಿಗಳು ಮನುಷ್ಯರಕಿಂತ ಕಡಿಮೆ ॥ ೩೪ ॥

ನೀವು ಸರ್ವರೂ ನಮ್ಮ ಗುರುಗಳು ಸಾಷ್ಟಾಂಗ ಪ್ರಣತಿಪೂರ್ವಕ ನಮಸ್ಕರಿಸಿ ಪ್ರಾರ್ಥಿಸುತ್ತೇನೆ. ಜ್ಞಾನಭಕ್ತಿವೈರಾಗ್ಯ ಕೊಟ್ಟು ಉದ್ಧಾರ ಮಾಡೋದು. ಸರ್ವಕ್ರಿಯಾಗಳಲ್ಲಿ ಹರಿಸ್ಮೃತಿ ಕೊಡೋದು ನಿಮ್ಮ ಹೊರತು ಇನ್ನೊಂದು ಗತಿ ಇಲ್ಲ, ರಕ್ಷಿಸಬೇಕು.

ಜೀವೇಶಯೋರ್ಭಿದಾ ಚೈವ ಜೀವಭೇದಃ ಪರಸ್ಪರಂ।
ಜಡೇಶಯೋರ್ಜಡಾನಾಂ ಚ ಜಡಜೀವಭಿದಾ ತಥಾ ॥
ಪಂಚಭೇದಾ ಇಮೇ ನಿತ್ಯಾಃ ಸರ್ವಾವಸ್ಥಾಸು ಸರ್ವದಾ ॥

॥ ಶ್ರೀಮಧ್ವೇಶಾರ್ಪಣಮಸ್ತು ॥

*****

## ಪರಿಶಿಷ್ಟ - ೨೦

## ತಾರತಮ್ಯಕ್ರಮದಲ್ಲಿ ದೇವತಾಸ್ತುತಿ

ಸತತ ಗಣನಾಥ ಸಿದ್ಧಿಯನೀವ ಕಾರ್ಯದಲಿ
ಮತಿಪ್ರೇರಕಳು ಪಾರ್ವತೀದೇವೀ ಮು -
ಕುತಿಪಥಕೀವ ಮನ ಮಹರುದ್ರದೇವರು ಭ -
ಕುತಿದಾಯಕಳು ಭಾರತೀದೇವೀ ಯು -
ಕುತಿಶಾಸ್ತ್ರಗಳಲ್ಲಿ ವನಸಂಭವನರಸಿ
ಸತ್ಕರ್ಮಗಳ ನಡೆಸಿ ಸುಜ್ಞಾನ ಮತಿಯಿತ್ತು
ಗತಿ ಪಾಲಿಸುವ ನಮ್ಮ ಪವಮಾನನು

ಚಿತ್ತದಲಿ ಆನಂದವೀವಳು ರಮಾ ಭ -
ಕುತಜನರೊಡೆಯ ಶ್ರೀಪುರಂದರವಿಠಲನು
ಸತತ ಇವರಲಿ ನಿಂತು ಕೃತಿಯ ನಡೆಸುವನು

*****

## ಪರಿಶಿಷ್ಟ - ೨೧

## ದೇವತಾತಾರತಮ್ಯ (ಕೀರ್ತನೆ)

ರಾಗ : ಸೌರಾಷ್ಟ್ರ ತಾಳ: ತ್ರಿಪುಟ

ಸತ್ಯ ಜಗಕಿದು ಪಂಚಭೇದವು
ನಿತ್ಯ ಶ್ರೀಗೋವಿಂದನ
ಕೃತ್ಯವರಿತು ತಾರತಮ್ಯದಿ
ಕೃಷ್ಣನಧಿಕೆಂದು ಸಾರಿರೈ ॥ ಪ ॥

ಜೀವ ಈಶಗೆ ಭೇದ ಸರ್ವತ್ರ
ಜೀವ ಜೀವಕೆ ಭೇದವು
ಜೀವಜಡಕೆ ಜಡಜಡಕೆ ಭೇದ
ಜೀವಜಡ ಪರಮಾತ್ಮಗೆ ॥ ೧ ॥

ಮಾನುಷೋತ್ತಮರಧಿಕ ಕ್ಷಿತಿಪರು
ಮನುಜದೇವಗಂಧರ್ವರು
ಜ್ಞಾನಿಪಿತ್ರಾಜಾನಕರ್ಮಜ
ದಾನವಾರಿತತ್ತ್ವೇಶರು ॥ ೨ ॥

ಗಣಪ ಮಿತ್ರನು ಸಪ್ತ ಋಷಿಗಳು
ವಹ್ನಿನಾರದ ವರುಣನು
ಇನಜಗೆ ಸಮ ಚಂದ್ರಸೂರ್ಯರು
ಮನುಸುತೆಯು ಹೆಚ್ಚು ಪ್ರವಹನು ॥ ೩ ॥

ದಕ್ಷಸಮ ಅನಿರುದ್ಧ ಶಚಿ ಗುರು
ರತಿ ಸ್ವಯಂಭುವರಾರ್ವರು
ಪ್ರಾಣಗಿಂತ ಅಧಿಕ ಕಾಮನು
ಕಿಂಚಿದಧಿಕನು ಇಂದ್ರನು ॥ ೪ ॥

ದೇವ ಇಂದ್ರಗೆ ಅಧಿಕ ಮಹರುದ್ರ
ದೇವ ಸಮ ಶೇಷಗರುಡರು

ಕೇವಲ ರುದ್ರ ಶೇಷಗರುಡಗೆ
ದೇವಿ ಹೆಚ್ಚು ಸರಸ್ವತಿ ॥ ೫ ॥

ವಾಯುವಿಗೆ ಸಮರಿಲ್ಲ ಜಗದೊಳು
ವಾಯುದೇವರೆ ಬ್ರಹ್ಮರು
ವಾಯುಬ್ರಹ್ಮಗೆ ಕೋಟಿಗುಣದಿಂ -
ದಧಿಕ ಶಕ್ತಳು ಶ್ರೀರಮಾ ॥ ೬ ॥

ಅನಂತಗುಣಗಳಿಂದಧಿಕ ಲಕುಮಿಗೆ
ಆದಿ ಪುರಂದರವಿಠಲನು
ಘನರು ಸಮರೂ ಇಲ್ಲ ಜಗದೊಳು
ಹನುಮಹೃತ್ಪದ್ಮವಾಸಿಗೆ ॥ ೭ ॥

*****

## ಪರಿಶಿಷ್ಟ- ೨೨

### ತಾರತಮ್ಯಮಂಗಲ

ರಾಗ : ನಾಟಿ ತಾಳ : ಅಟ

ಶ್ರೀಪತಿಯು ನಮಗೆ ಸಂಪದವೀಯಲಿ
ವಾಣೀಪತಿಯು ನಮಗೆ ದೀರ್ಘಾಯು ಕೊಡಲಿ ಪ

ಸುರರ ಗಣವನು ಪೊರೆಯೆ ವಿಷವ ಕಂಠದಲಿಟ್ಟ
ಹರ ನಮಗೆ ಸಂತತ ಸಹಾಯಕನಾಗಲಿ
ನರರೊಳುನ್ನತವಾದ ಭೋಗ ಭಾಗ್ಯಂಗಳನು
ಪುರುಹೂತ ಪೂರ್ಣಮಾಡಿಸಲಿ ನಮಗೆ ೧

ವಿನುತ ಸಿದ್ಧಿಪ್ರದನು ವಿಘ್ನೇಶ ದಯದಿಂದ
ನೆನೆದ ಕಾರ್ಯಗಳೆಲ್ಲ ನೆರವೇರಿಸಲಿ
ದಿನದಿನದಿ ಅಶ್ವಿನಿಗಳಾಪತ್ತುಗಳ ಕಳೆದು
ಮನಕೆ ಹರುಷವನಿತ್ತು ಮನ್ನಿಸಲಿ ಬಿಡದೆ ೨

ನಿರುತ ಸುಜ್ಞಾನವನು ಈವ ಮಧ್ವರಾಯ
ಗುರುಗಳಾಶೀರ್ವಾದ ನಮಗಾಗಲಿ
ಪುರಂದರವಿಠಲನ ಕರುಣದಿಂದಲಿ ಸಕಲ
ಸುರರೊಲುಮೆ ನಮಗೆ ಸುಸ್ಥಿರವಾಗಲಿ ೩

*****

## ಪರಿಶಿಷ್ಟ - ೨೩

### ಸಂಸಾರದಲ್ಲಿ ದೇವತಾತಾರತಮ್ಯ ಚಿಂತನೆ

ರಾಗ : ಬಾಗೇಶ್ರೀ — ತಾಳ : ಝಂಪೆ

ಸಂಸಾರವೆಂಬಂಥ ಭಾಗ್ಯವಿರಲಿ
ಕಂಸಾರಿ ನೆನೆವೆಂಬ ಸೌಭಾಗ್ಯವೆನಗಿರಲಿ ಪ

ತಂದೆ ನೀನೇ ಕೃಷ್ಣ ತಾಯಿ ಇಂದಿರೆದೇವಿ
ಪೊಂದಿದ ಅಣ್ಣನು ವನಜಸಂಭವನು
ಇಂದುಮುಖಿ ಸರಸ್ವತೀದೇವಿಯೆ ಅತ್ತಿಗೆಯು
ಎಂದೆಂದಿಗೂ ವಾಯುದೇವರೇ ಗುರುವು ೧

ಭಾರತೀದೇವಿಯೇ ಗುರುಪತ್ನಿಯು ಎನಗೆ
ಗರುಡಶೇಷಾದಿಗಳೇ ಗುರುಪುತ್ರರು
ಹರಿದಾಸರೆಂಬುವರೆ ಇಷ್ಟಬಾಂಧವರೆನಗೆ
ಹರಿಭಜನೆ ನಡೆಯುತಿಹ ಸ್ಥಳವೆ ಮಂದಿರವು ೨

ಸರುವಾಭಿಮಾನವನು ತ್ಯಜಿಸುವುದೆ ಸುಸ್ನಾನ
ಹರಿಯ ನಾಮವೆ ಇನ್ನು ಅಮೃತಪಾನ
ವರದ ಪುರಂದರವಿಠಲ ನಿನ್ನ ಪಾದಧ್ಯಾನ
ಕರುಣಿಸಿ ಅನವರತ ಕರಪಿಡಿದು ಕಾಯೋ ೩

*****

## ಪರಿಶಿಷ್ಟ - ೨೪

### ಬೃಹತ್ತಾರತಮ್ಯ ಪದ

ರಾಗ : ವಸಂತಭೈರವಿ — ತಾಳ : ಝಂಪೆ

ಆ ನಮಿಪೆ ವಿಷ್ಣುಶ್ರೀಬ್ರಹ್ಮವಾಯೂ
ವಾಣಿಭಾರತಿಮುಖ್ಯರವತಾರ ಆವೇಶಕಾನಮಿಪೆ ॥ ಪ ॥

ಶ್ರೀಮತ್ಸ್ಯ ಕೂರ್ಮ ಭೂವರಾಹ ನರಸಿಂಹ ದಧಿ-
ವಾಮನ ತ್ರಿವಿಕ್ರಮ ಭೃಗುಕುಲೋದ್ಭವಾ
ರಾಮ ಯಾದವ ಕೃಷ್ಣ ಬುದ್ಧ ಕಲ್ಕಿ ಹಯಾಸ್ಯ-
ನಾಮ ತಾಪಸ ಮನು ಉಪೇಂದ್ರ ಅಜಿತಾದಿಗಳಿಗೆ ॥ ೧ ॥

ವಾಸುದೇವಾಚ್ಯುತಾನಂತ ಗೋವಿಂದ ಮಹಿ-
ದಾಸ ಧನ್ವಂತ್ರಿ ಹರಿ ಹಂಸ ದತ್ತಾ
ವ್ಯಾಸ ಕಪಿಲಾತ್ಮಾಂತರಾತ್ಮ ಪರಮಾತ್ಮ ಯ -
ಜ್ಞೇಶ ವೈಕುಂಠ ನಾರಾಯಣಾದ್ಯವತಾರಕೆ ॥ ೨ ॥

ನಾರಾಯಣೀ ಋಷಭ ಐತರೇಯ ಶಿಂಶು-
ಮಾರ ಯಜ್ಞ ಪ್ರಾಜ್ಞ ಸಂಕರುಷಣಾ
ಕ್ಷೀರಾಬ್ಧಿನಿಲಯ ಯಮನಂದನಾ ಕೃಷ್ಣ ಹರಿ
ನಾರಾಯಣ ಧರ್ಮಸೇತುರೂಪಾದಿಗಳಿಗೆ ॥ ೩ ॥

ಗುಣಗಳಭಿಮಾನಿಶ್ರೀಭೂದುರ್ಗದಕ್ಷಿಣಾಂ-
ಭೃಣಿ ಮಹಾಲಕ್ಷ್ಮಿ ಶ್ರೀವಿಷ್ಣುಪತ್ನೀ
ಜನನಿ ಮಾಯಾ ಜಯ ಕೃತಿ ಶಾಂತಿ ಶುದ್ಧ ರು-
ಕ್ಮಿಣಿ ಸತ್ಯ ಸೀತಾದ್ಯಮಿತ ರೂಪಗಳಿಗೆ ॥ ೪ ॥

ಹೀನಳೆನಿಸುವಳನಂತಾಂಶದಲಿ ಸುಖ ಬಲ-
ಜ್ಞಾನಾದಿಗುಣದಿ ಮಹಲಕ್ಷ್ಮಿ ಹರಿಗೆ
ಆನಂದವಿಜ್ಞಾನಮಯನ ವಕ್ಷಸ್ಥಳವೆ-
ಸ್ಥಾನವಾಗಿಹುದು ಇಂದಿರೆಗೆ ಆವಾಗ ॥ ೫ ॥

ಪುರುಷನಾಮಕವಿಧಿವಿರಿಂಚಿ ಮಹಾನ್ ಬ್ರಹ್ಮ-
ಸುರುಚಿ ಮುಖ್ಯಪ್ರಾಣ ಸೂತ್ರಸ್ಮೃತೀ
ಗುರುಮಹಾಪ್ರಭು ಋಜುಸಮಾನ ವಿಜ್ಞ ಪ್ರಾಜ್ಞ-
ಹರಿಭಕ್ತಿ ಮೇಧಾವಿ ಮುಕ್ತಿ ಧೃತಿ ಅಮೃತನಿಗೆ ಆ ನಮಿಪೆ ॥ ೬ ॥

ಸ್ಥಿತಿ ಯೋಗ ವೈರಾಗ್ಯಚಿಂತ್ಯ ಬಲಸುಖ ಬುದ್ಧಿ-
ವಿತತಾದಿ ಗೋಪ ಹನುಮ ಭೀಮ
ವ್ರತಿವರಾನಂದಮುನಿ ಮೊದಲಾದ ರೂಪ ಶ್ರೀ-
ಪತಿಗಧಿಷ್ಠಾನ ಕೋಟಿಗುಣಾಧಮರು ರಮೆಗೆ ಆ ನಮಿಪೆ ॥ ೭ ॥

ಸರಸ್ವತೀ ಗಾಯತ್ರಿ ಬುದ್ಧಿ ವಿದ್ಯಾ ಪ್ರೀತಿ-
ಗುರುಭಕ್ತಿ ಸರ್ವ ವೇದಾತ್ಮಿಕಾ ಭುಜಿ
ಪರಮಾನುಭೂತಿ ಸಾವಿತ್ರಿ ಸುಸುಖಾತ್ಮಿಕಾ-
ಪರಮೇಷ್ಠಿ ಪತಿನಾಮಗಳಿವೆಂದರಿದೂ ಆ ನಮಿಪೆ ॥ ೮ ॥

ಶಿವಕನ್ಯಾ ಇಂದ್ರಸೇನಾ ಕಾಶಿಜಾ ಚಂದ್ರಾ-
ಯುವತಿ ದ್ರೌಪದಿಯು ಭಾರತಿರೂಪವು

ಪವಮಾನಬ್ರಹ್ಮರಿಗೆ ಶತಗುಣಾಧಮ ಸದಾ-
ಶಿವನ ರೂಪಗಳ ಈ ಪರಿಯಲ್ಲಿ ಚಿಂತಿಸುತ ಆ ನಮಿಪೆ ॥ ೯ ॥

ತತ್ಪುಮಾನೂರ್ಧ್ವಪಟ ದುರ್ವಾಸ ವ್ಯಾಧ ಅ-
ಶ್ವತ್ಥಾಮ ಜೈಗೀಷ ತಪ ಅಹಂಕ್ರತೂ
ನಿತ್ಯ ವಾಯ್ವಾವಿಷ್ಟಶುಕ ವಾಮದೇವ ಗುರು-
ಮೃತ್ಯುಂಜಯೌರ್ವ ಸದ್ಯೋಜಾತ ತತ್ಪುರುಷಗೆ ಆ ನಮಿಪೆ ॥ ೧೦ ॥

ನರ ವಾಯು ಶುಕ್ಲಕೇಶಾವೇಶ ಬಲಗೆ ಸಂ-
ಕರುಣಾವೇಶ ಲಕ್ಷ್ಮಣದೇವಗೇ
ಗರುಡಶೇಷಾಘೋರ ಸಮರು ಶತಗುಣದಿಂದ
ಕೊರತೆಯೆನಿಸುವರು ಮೂವರು ವಾಣಿದೇವಿಗೆ ಆ ನಮಿಪೆ ॥ ೧೧ ॥

ಶೇಷಗೆ ಸಮಾನಳೆನಿಪಳು ಜಾಂಬವತಿ ರಮಾ-
ವೇಶಕಾಲದಿ ಷಣ್ಮಹಿಷಿಯರೊಳಗೆ
ಹ್ರಾಸಕಾಲದಿ ಸಮಳು ಐವರಿಗೆ ಜಾಂಬವತಿ-
ವೀಶಾದ್ಯರಿಗೆ ಹರಿ ಸ್ತ್ರೀಯರಸಮರೈದುಗುಣಕಾನಮಿಪೆ ॥ ೧೨ ॥

ರೇವತೀ ಶ್ರೀಯುತಶ್ರೀಪೇಯರೂಪತ್ರ-
ಯಾವಕಾಲದಿ ವಾರುಣಿಗೆ ಪಾರ್ವತೀ
ದೇವಿ ಸೌಪರಣಿಗೆ ಸಮ ಷಣ್ಮಹಿಷಿಯರಿಗೆರಡು-
ಮೂವರೀರೈದು ಗುಣಕಡಿಮೆ ಪತಿಗಳಿಗೆ ಎಂದೂ ಆ ನಮಿಪೆ ॥ ೧೩ ॥

ಕುಶ ವಾಲಿ ಗಾಧಿ ಮಂದ್ರದ್ಯುಮ್ನನು ವಿಕುಕ್ಷಿ-
ಶ್ವಸನ ಹರಿ ಶೇಷಸಂಯುಕ್ತಾರ್ಜುನಾ
ಅಶನೀಧರನ ಸುರೂಪಂಗಳಿವು ಮನ್ಮಥನ-
ಪೆಸರು ಪೇಳುವೆನು ಅವತಾರಗಳ ನಿತ್ಯ ॥ ೧೪ ॥

ಪ್ರದ್ಯುಮ್ನಸಂಯುಕ್ತ ರುಕ್ಮಿಣೀದೇವಿ ಸುತ-
ಪ್ರದ್ಯುಮ್ನ ಭರತನು ಸನತ್ಕುಮಾರಾ
ಪದ್ಮಜಾವಿಷ್ಟಸಾಂಬ ಸ್ಕಂದ ಸುದರುಶನ-
ರುದ್ರನರ್ಧಾಂಗಿನಿಗೆ ದಶಗುಣಾಧಮರೆಂದು ಆ ನಮಿಪೆ ॥ ೧೫ ॥

ಕಾಮೇಂದ್ರರಿಗೆ ದಶಾಧಮ ಅಹಂಭವಪ್ರಾಣ-
ನಾಮಕಗೆ ರೂಪ ಸರ್ವೋತ್ತುಂಗನೂ
ಕಾಮಪುತ್ರಾನಿರುದ್ಧಾದಿಗಳು ದಶಹೀನ-
ಈ ಮಹಾತ್ಮರ ದಿವ್ಯ ಅವತಾರರೂಪಗಳಿಗೆ ಆ ನಮಿಪೆ ॥ ೧೬ ॥

ತಾರನಾಮಕ ಪ್ಲವಗ ಬ್ರಹ್ಮಾಂಶಯುಗ್ದ್ರೋಣ-
ಮಾರುತಾವೇಶಸಂಯುತ ಉದ್ಧವಾ
ಮೂರುರೂಪವು ಬೃಹಸ್ಪತಿಗೆ ಪ್ರದ್ಯುಮ್ನನ ಕು-
ಮಾರಾನಿರುದ್ಧ ಶತ್ರುಘ್ನ ಅನಿರುದ್ಧನಿಗೆ ಆ ನಮಿಪೆ ॥ ೧೭ ॥

ತಾರೆ ಚಿತ್ರಾಂಗದ ಶಚಿರೂಪ ಲಕ್ಷಣಾ
ಈ ರುಗಮವತಿ ಎರಡು ರತಿರೂಪವೂ
ಆರುಜನ ದಕ್ಷ ಸ್ವಯಂಭುವ ಮನು ಪ್ರಾಣ-
ಗೀರೈದು ಗುಣಗಳಿಂದಧಮರೆಂದರಿದೂ ಆ ನಮಿಪೆ ॥ ೧೮ ॥

ಭೂತಾಭಿಮಾನಿಪ್ರವಹ ಪಂಚಗುಣದಿ ಪುರು-
ಹೂತಪತ್ನ್ಯಾದಿಗಳಿಗಧಮನೆನಿಪಾ
ಈತಗವತಾರವಿಲ್ಲವನಿಯೊಳು ಚಂದ್ರ ಪ್ರ-
ದ್ಯೋತನಾಂತಕ ಸ್ವಯಂಭುವ ಪತ್ನಿ ಶತರೂಪಿಗೆ ಆ ನಮಿಪೆ ॥ ೧೯ ॥

ಸತ್ಯಜಿತು ಜಾಂಬವಾನ್ ವಿದುರ ಗುರು ವಾಯುಸಂ-
ಯುಕ್ತ ಧರ್ಮಜ ಯಮಗೆ ರೂಪ ನಾಲ್ಕು
ರಾತ್ರಿಚರನವತಾರ ಇಂದ್ರಯುಕ್ತಾಂಗದಾ-
ದಿತ್ಯನವತಾರ ಬ್ರಹ್ಮಾವಿಷ್ಟಸುಗ್ರೀವಗಾನಮಿಪೆ ॥ ೨೦ ॥

ಹರಿಯುಕ್ತಕರ್ಣ ಮನುಪತ್ನಿ ಶತರೂಪ ನಾ-
ಲ್ವರು ಸಮರು ಪ್ರವಹಗಿಂದೆರಡು ಗುಣದೀ
ಕೊರತಿ ಮಹಭಿಷಕು ಮಂಡೂಕ ಶಂತನು ಸುಷೇ-
ಣ್ವರುಣರೂಪಗಳಧಮಪಾದಪದಾರ್ಥಗೆ ಆ ನಮಿಪೆ ॥ ೨೧ ॥

ನಾರದಾಧಮ ವರುಣಗಿಂತಗ್ನಿ ಅವ-
ತಾರ ದೃಷ್ಟದ್ಯುಮ್ನ ಲವನೀಲರೂ
ಮೂರು ಭೃಗುರೂಪ ಜನರೆಂಬ ವ್ಯಾಧ ಪ್ರಸೂತಿ-
ವಾರಿನಿಧಿಗಿಂದ ಪಾದ ಗುಣಾಧಮರು ಎಂದು ಆ ನಮಿಪೆ ॥ ೨೨ ॥

ಅಂಗಿರ ಪುಲಸ್ತ್ಯಾತ್ರಿ ಪುಲಹನು ಮರೀಚಿ ಮುನಿ-
ಪುಂಗವ ವಶಿಷ್ಠ ಕ್ರತು ಬ್ರಹ್ಮಸುತರೂ
ತುಂಗ ವಿಶ್ವಾಮಿತ್ರ ವೈವಸ್ವತರು ಸದಾ
ತೆಂಗದಿರಗಧಮರೊಂಭತ್ತು ಜನರೆಂದು ಆ ನಮಿಪೆ ॥ ೨೩ ॥

ಸಪ್ತಋಷಿಗಳಿಗೆ ಸಮನೆನಿಪ ವೈವಸ್ವತನು
ಸಪ್ತವಾಹನನ ಆವೇಶಬಲದೀ

ಲುಪ್ತವಾಗಲು ಕಡಿಮೆಯೆನಿಪ ಪ್ರಾವಹಿ ತಾರ
ಕ್ಲುಪ್ತ ಒಂದೇ ರೂಪ ಕೃಪೆಯೆಂದು ಕರೆಸುವಳಿಗೆ ಆ ನಮಿಪೆ ॥ ೨೪ ॥

ಹರನಾವೇಶಯುತ ಘಟೋತ್ಕಚ ದುರ್ಮುಖನು
ನಿರ್ಋತಿ ಕರೆಸುವನು ರಾಹುಯುಗ್ಜಿಷ್ಣುಕನೃಪಾ
ನೆರೆ ಮಿತ್ರನಾಮಕನ ರೂಪ ನಾಲ್ವರು ಅಗ್ನಿ-
ಗೆರಡು ಗುಣದಿಂಧಮರೆನಿಪರೆಂದೆಂದು ಆ ನಮಿಪೆ ॥ ೨೫ ॥

ಮಾರಾರಿಯುಕ್ತಭಗದತ್ತ ಕತ್ಥನ ಯೀ ಕು-
ಬೇರಗೆರಡವತಾರ ವಿಘ್ನೇಶಗೇ
ಚಾರುದೇಷ್ಣನು ಒಂದೆ ಇಂದ್ರನಾವೇಶಯುತ
ಆರುರೂಪಗಳುಳ್ಳ ನಾಸತ್ಯದಸ್ರರಿಗೆ ಆ ನಮಿಪೆ ॥ ೨೬ ॥

ವಿವಿದ ಮೈಂದ ತ್ರಿಶಿಖ ನಕುಲ ಸಹದೇವ ವಿಭು
ಅವತಾರ ಅಶ್ವಿನೀ ದೇವತೆಗಳಾ
ಲವಣಾದಿಷಡ್ರಸಗಳೊಳಗಿದ್ದು ಜೀವರಿಗೆ
ವಿವಿಧಭೋಗಗಳಿತ್ತು ಸಂತೈಪರೆಂದೆಂದು ಆ ನಮಿಪೆ ॥ ೨೭ ॥

ದ್ರೋಣಾರ್ಕದೋಷಾಗ್ನಿ ಧ್ರುವವಿಭಾವಸುವಸ್ತು
ಪ್ರಾಣಾಷ್ಟವಸುಗಳೊಳಗೆ ದ್ಯುನಾಮಕಾ
ವಾಣೀಶಯುಕ್ತಭೀಷ್ಮನು ನಂದಗೋಪಾಲ
ದ್ರೋಣನಾಮಕಪ್ರಧಾನಾಗ್ನಿಗಿಂದಧಮರೆಂದೂ ಆ ನಮಿಪೆ ॥ ೨೮ ॥

ಭೀಮರೈವತ ಅಜೈಕಪಾದಹಿರ್ಬುಧ್ನಿ ಭವ
ವಾಮಬಹುರೂಪೋಗ್ರಜವೃಷಾಕಪೀ
ಈ ಮಹನ್ನೆಂಬ ಹನ್ನೊಂದು ರುದ್ರರು ಭೂರಿ-
ನಾಮಕಜೈಕಪಾದಹಿರ್ಬುಧ್ನಿಭೂರಿಶ್ರವಗಾನಮಿಪೆ ॥ ೨೯ ॥

ತ್ರ್ಯಕ್ಷನುಳಿದ್ಹತ್ತು ರುದ್ರರು ಸಮರು ಶಲ ವಿರೂ-
ಪಾಕ್ಷನವತಾರ ಕೃಪ ವಿಷ್ಕಂಭನೂ
ಅಕ್ಷೀಣಬಲ ಪತ್ರತಾಪಕ ಸಹದೇವ
ರಕ್ಷಘ್ನ ಸೋಮದತ್ತನು ಎನಿಸುತಿಹಗಾನಮಿಪೆ ॥ ೩೦ ॥

ವಿರೂಪಾಕ್ಷ ವಿಷ್ಕಂಭ ಪತ್ರತಾಪಕ ಮೂರು
ಹರನ ರೂಪಾಂತರಗಳಿವು ವಿವಸ್ವಾನ್
ಅರಿಯಮ ಪೂಷ ಭಗ ಸವಿತು ತ್ವಷ್ಟ್ರಾ ಧಾತ
ವರುಣ ಶಕ್ರೋರುಕ್ರಮನು ಮಿತ್ರ ಪರ್ಜನ್ಯಗಾನಮಿಪೆ ॥ ೩೧ ॥

ಶೌರಿನಂದನಭಾನು ಸವಿತೃನಾಮಕ ಸೂರ್ಯ
ವೀರಸೇನನು ಯಮಾವಿಷ್ಟತ್ವಷ್ಟೃ
ಆರು ಜನರುತ್ತರೆನಿಪರು ಉರುಕ್ರಮ ಶಕ್ರ
ವಾರಿಧಿ ವಿವಸ್ವಾನ್ ಮಿತ್ರ ಪರ್ಜನ್ಯರಿಗೆ ಆನಮಿಪೆ ॥ ೩೨ ॥

ಪ್ರಾಣ ನಾಗ ಪಂಚಕ ಅಹಂಕಾರಿಕ-
ಪ್ರಾಣ ಪ್ರವಹ ನಿವಹ ಸಂವಹ ಸ್ವಹಾ
ಮಾನದಾವಹ ವಿವಹ ಕಾಲ ಶ್ವಾಸ ಏ-
ಕೋನ ಪಂಚಾಶನ್ಮರುದ್ಗಣಸ್ಥರು ಎಂದು ಆನಮಿಪೆ ॥ ೩೩ ॥

ಅನಿಳ ನಳ ಕುಮುದ ಮಂಡೂಕ ಸಾಂಗ ಶ್ವೇತ ಶಂ-
ತನು ಕೃಷ್ಣ ಶುಚಿ ಶಂಕು ರಕ್ತ ಸಿಂಧೂ
ಹನು ಭೀಮ ಯತಿ ಉದಿತ ಕಾಮ ಜಡಪಿಂಗ ಕಂ-
ಪನ ಉದ್ವಹ ಧನಂಜಯ ದೇವದತ್ತರಿಗೇ ॥ ೩೪ ॥

ಶುಕ ಶಂಕು ಗುರು ಕಾಂತ ಪ್ರತಿಭ ಸಂವರ್ತಕನು
ಪಿಕ ಕಪಿಗಳಿವರು ಮರುತರು ಸಮೀರಾ
ಯುಕುತ ಪಾಂಡು ವರಾಹನು ಎನಿಪ ಸಂಪಾತಿ
ಭೃಕುಟಿ ಕೇಸರಿ ಶ್ವೇತ ಮರುತನವತಾರವೆಂದಾನಮಿಪೆ ॥ ೩೫ ॥

ಪ್ರತಿಭನಂಶನು ಚೇಕಿತಾನನೆಂದೆನಿಪ ಏ-
ಪೃಥು ಸೌಮ್ಯ ಕುಂತಿಭೋಜನೆ ಕೂರ್ಮನೂ
ಕ್ಷಿತಿಯೊಳಗೆ ಪ್ರಾಣಪಂಚಕರೊಳು ಪ್ರಾಣ ಗಜ
ಅಥ ಗವಾಕ್ಷಾಪಾನ ವ್ಯಾನ ಗವಯನು ಎಂದಾನಮಿಪೆ ॥ ೩೬ ॥

ವೃಷನು ಶರ್ವತ್ರಾತನು ಉದಾನಗಂಧಮಾ-
ದ ಸಮಾನರಿವರು ವಿತ್ತಪನ ಸುತರು
ಶ್ವಸನಗಣದೊಳು ಕಿಂಚಿದುತ್ತಮರಹಂಪ್ರವಹ-
ಗಸಮರೆನಿಪರು ಪ್ರಾಣಪಂಚಕರು ಎಂದೂ ಆ ನಮಿಪೆ ॥ ೩೭ ॥

ಪ್ರತಿವಿಂದ್ಯ ಧರ್ಮಜನು ಭೀಮಸೇನನ ಪುತ್ರ-
ಶ್ರುತಸೋಮ ಅರ್ಜುನಜ ಶ್ರುತಕೀರ್ತಿಪಾ
ಶತಾನೀಕ ನಕುಲಜ ಸಹದೇವಾತ್ಮಜನು-
ಶ್ರುತಕರ್ಮರಿವರು ದ್ರೌಪದಿದೇವಿಗಾತ್ಮಜರಿಗಾನಮಿಪೆ ॥ ೩೮ ॥

ಚಿತ್ರರಥ ಅಭಿತಾಮ್ರ ಬಲ ಕಿಶೋರ ಗೋಪಾಲ -
ರುತ್ತಮರು ಗಂಧರ್ವರೈವರಿಂದ

ಯುಕ್ತರಾಗಿಹರು ಕೈಕೇಯರೈವರು ಪಾಂಡು-
ಪುತ್ರಜರು ವಿಶ್ವೇದೇವತೆಗಳಿವರೆಂದು ಆನಮಿಪೆ ॥ ೩೯ ॥

ಧ್ರುವಕಾಲ ಕಾಮಲೋಚನದಕ್ಷ ಕ್ರತು ಪುರೂ-
ರವ ಸತ್ಯ ವಸು ಧುರಿಗಳಿವರು ವಿಶ್ವೇ-
ದಿವಿಜರೀರ್ವರೈದು ಋಭು ಗುಣಪಿತೃತ್ರಯ ದ್ಯಾವ
ಅವನಿಪರು ಗಣಪಾದ್ಯರಧಮಮಿತ್ರನಿಗೆಂದು ಆನಮಿಪೆ ॥ ೪೦ ॥

ವಸುಗಳೆಂಟಾದಿತ್ಯರೀರಾರು ಒಂದಧಿಕ-
ದಶರುದ್ರಗಣ ಪಿತೃತ್ರಯ ಬೃಹಸ್ಪತೀ
ದಶ ವಿಶ್ವದೇವ ಅಶ್ವಿನಿಗಳೆರಡೈವತ್ತು-
ಶ್ವಸನಗಣರು ಋಭುವೊಂದು ಎರಡು ದ್ಯಾವಾಪೃಥಿವಿಗಾನಮಿಪೆ ॥ ೪೧ ॥

ಒಂಭತ್ತು ಕೋಟಿದೇವತೆಗಳೊಳು ನೂರುಜನ-
ಕೆಂಬವರಿಗೆ ಸೋಮಪಾನಾರ್ಹರೂ
ಅಂಬುಜಾಪ್ತರ ಒಳಗುರುಕ್ರಮನುಳಿದು ಪದ್ಮ-
ಸಂಭವನ ಸಹರಾಗಿಹ ಶತಸ್ಥರಿಗೇ ಆ ನಮಿಪೆ ॥ ೪೨ ॥

ಮರುತತ್ರಯರು ವಹ್ನಿಯಮಸೋಮಶಿವಾದಿವಾ-
ಕರಾರು ರುದ್ರ ಗುರು ಇವರುಕ್ತರೂ
ಉರವರಿತ ಎಂಭತ್ತೈದು ಸಮರು ತಮ್ಮೊಳಗೆ
ಸರಸಿಜೋದ್ಭವ ಸುತರೆನಿಪ ಸನಕಾದಿಗಳಿಗಾನಮಿಪೆ ॥ ೪೩ ॥

ಸನಕಾದಿಗಳೊಳುತ್ತಮ ಸನತ್ಕುಮಾರ ಶಿಖಿ-
ತನುಜ ಪಾವಕನು ಪರ್ಜನ್ಯನು ಮೇಘಪ
ಎನಿಸುವನು ಶರಭವೊಂದೇ ರೂಪ ಧರ್ಮರಾ-
ಜನ ಪತ್ನಿ ದೇವಕಿಯು ಶಾಮಲೆಯ ರೂಪವೆಂದೂ ಆ ನಮಿಪೆ ॥ ೪೪ ॥

ಯಮಭಾರ್ಯ ಶಾಮಲಾ ರೋಹಿಣೀದೇವಿ ಚಂ-
ದ್ರಮನ ಸ್ತ್ರೀ ಅನಿರುದ್ಧಗೇಹಿ ಉಷಾ-
ದ್ಯುಮಣಿ ಭಾರ್ಯಾ ಸಂಜ್ಞ ಗಂಗಾ ವರುಣ ಭಾರ್ಯಾ-
ಸಮರಾರು ಜನರು ಪಾವಕಗೆ ಕಿಂಚಿದಧಮರೆಂದೂ ಆ ನಮಿಪೆ ॥ ೪೫ ॥

ಎರಡು ಗುಣ ಮಿತ್ರಗಿಂದಧಮ ಪರ್ಜನ್ಯ ಈ-
ರೆರಡು ವಹ್ನಿಗೆ ಕಡಿಮೆ ಪಾದಮಾನೀ
ಸುರಪನಂದನ ಜಯಂತನು ಪ್ರಹಲ್ಲಾದ ಈ-
ರ್ವರು ಮುಖ್ಯರಧಮ ಪರ್ಜನ್ಯಗೆಂದೆಂದು ಆ ನಮಿಪೆ ॥ ೪೬ ॥

ಎರಡು ಗುಣ ಪರ್ಜನ್ಯಗಿಂದಧಮಳು ಸ್ವಹಾ
ಎರಡಧಿಕ ಗುಣದಿ ಸ್ವಪತಿಗೆ ನೀಚಳೂ
ಹರಿಶಕ್ರಶಶಿಅಶ್ವಿಯುಕ್ತಾಭಿಮನ್ಯು ಚಂ-
ದಿರಜ ಬುಧನವತಾರ ಸ್ವಾಹಾದೇವಿಗಧಮನೆಂದಾನಮಿಪೆ || ೪೭ ||

ಎನಿಸುವಳು ಶಲ್ಯಜರಾಸಂಧನಾತ್ಮಜಾ-
ಶ್ವಿನಿಭಾರ್ಯಾ ನಾಮಾಭಿಮಾನಿ ಉಷಾ
ಘನರಸಾಧಿಪ ಬುಧಗೆ ಕಿಂಚಿದ್ಗುಣದಿ ಕಡಿಮೆ
ಅನಲ ಪತ್ನಿಗೆ ದಶಗುಣಾಧಮಳು ಎಂದು ಆ ನಮಿಪೆ || ೪೮ ||

ಧರಣಿಗಭಿಮಾನಿ ಎನಿಸುವ ಸೂರ್ಯಸುತ ಶನ್ಯೈ-
ಶ್ಚರ ಉಷಾದೇವಿಗೆರಡು ಗುಣಾಧಮಾ
ತರಣಿನಂದನಗೆ ಸತ್ಕರ್ಮಾಭಿಮಾನಿ ಪು-
ಷ್ಕರ ಕಡಿಮೆ ಪಂಚಗುಣದಿಂದ ಎಂದೆಂದೂ ಆ ನಮಿಪೆ || ೪೯ ||

ನಾರದನ ಶಿಷ್ಯ ಪ್ರಹ್ಲಾದ ಬಾಲ್ಹೀಕ ಸ-
ಮೀರಸಂಯುಕ್ತ ಸಹ್ಲಾದ ಶಲ್ಯಾ
ಮೂರನೇ ಅನುಹ್ಲಾದ ಸವಿತ್ರನಾವೇಶದಲಿ
ತೋರಿದನು ಧೃಷ್ಟಕೇತು ಎನಿಸಿ ಧರೆಯೊಳಗೆ ಆ ನಮಿಪೆ || ೫೦ ||

ಕಾಮಾಂಶಯುಗ್ ಜಯಂತನು ಬಭ್ರುವಹ ವರುಣ-
ಭೌಮನು ಇರಾವಾನ್ ಚಿತ್ರಗುಪ್ತಾ
ನಾಮಕ ಸುಹೋತ್ರನು ಮಣಿಭದ್ರಾಖ್ಯ ಸು-
ತ್ರಾಮನವತಾರವೆಂದರಿದು ನಿತ್ಯದಲೀ ಆ ನಮಿಪೆ || ೫೧ ||

ಚಾವನೋಚಥ್ಯ ಋಷಿಗಳು ನೂರು ಚಾಕ್ಷುಷನು
ರೈವತ ಸ್ವಾರೋಚಿಷೋತ್ತಮನು
ಸಾವರ್ಣಿ ಬ್ರಹ್ಮ ರುದ್ರಾಹ್ವಸಾವರ್ಣಿತ್ರಯ
ದೇವೇಂದ್ರ ದಕ್ಷ ಧರ್ಮಾಖ್ಯ ಸಾವರ್ಣಿಗಳಿಗಾನಮಿಪೆ || ೫೨ ||

ಮನುಗಳೇಕಾದಶರು ತದನಂತರದಿ ವಿರೋ-
ಚನಪುತ್ರ ಬಲ್ಯಾದಿ ಭಾವೀಂದ್ರರಾ
ಇನಿತು ನಾಮವ ಪೇಳೆ ಕರ್ಮದೇವತೆಗಳೆಂ-
ದೆನಿಸುವರು ಲೋಕದೊಳು ಸರ್ವತ್ರ ಸರ್ವದಾನಮಿಪೆ || ೫೩ ||

ಬಲಿರದ್ಭುತ ಶಂಭು ವಿದ್ಯುತಿ ಋತಧಾಮ ನಿ-
ಷ್ಕಲುಷನು ದಿವಸ್ಪತಿಯು ಶುಚಿ ಸಪ್ತರು

ಕುಲಿಶಧರಪದಯೋಗ್ಯರನ್ನ ಕರ್ಮಪನ್ನಪರು
ಜಲಜಾಕ್ಷವಿಷ್ಣುನಾವೇಶಯುತರೆಂದು ಆ ನಮಿಪೆ ॥ ೫೪ ॥

ಕೃತವೀರ್ಯತನಯ ಶಶಬಿಂದು ಮಾಂ-
ಧಾತ ಗಯನಾಮಕ ಕಕುಸ್ಥಪ್ರೀಯವ್ರತತಿ ಜನ್ಮಾ
ಧೃತ ಭರತ ದೌಷ್ಯಂತಿ ಭರತಮುಖ್ಯರಾಜನ್ಯ
ಶತ ಅಷ್ಟಗಂಧರ್ವ ಸಪ್ತ ಪಿತೃಗಳಿಗೆ ಆ ನಮಿಪೆ ॥ ೫೫ ॥

ದ್ವಿನವತಿ ಅಪ್ಸರಸ್ತ್ರೀಯರು ಮೊದಲಾದ ಶತ-
ಗುಣದಿಂದಧಮರು ಪರ್ಜನ್ಯಗಿಂದ
ದನುಜಾರಿ ಆವೇಶ ಬರಲು ಪರ್ಜನ್ಯಾದಿ
ಅನಿಮಿಷರಿಗುತ್ತಮರು ಕರ್ಮದೇವತೆಗಳೆಂದಾನಮಿಪೆ ॥ ೫೬ ॥

ಸುರಕುಲೋದ್ಭವ ಅನಾಖ್ಯಾತ ಅಜಾನೇಯಾ-
ಮರರು ಎನಿಸುವರು ಉದ್ವಹನಾಮಕಾ
ಮರುತನಾವೇಶಯುತ ಸಂಜಯ ವಿರಾಧ ತುಂ-
ಬುರನ ಅವತಾರವೆಂದರಿದು ನಿತ್ಯದಲಿ ಆ ನಮಿಪೆ ॥ ೫೭ ॥

ಜನಮೇಜಯ ತ್ವಷ್ಟನಾವಿಷ್ಟ ಚಿತ್ರರಥ
ದನುನಾಮ ಗಂಧರ್ವ ದಮಘೋಷನೂ
ಎನಿಸುವ ಕಬಂಧದ್ವಯಾಬ್ಜ ಸ್ವಾಯಂಭು-
ಮನುಯುಕ್ತಾಕ್ರೂರ ಕರೆಸುವ ಕಿಶೋರೆಂದಾನಮಿಪೆ ॥ ೫೮ ॥

ಧೃತರಾಷ್ಟ್ರ ಗಂಧರ್ವ ವಾಯುನಾವೇಶದಿಂ
ಧೃತರಾಷ್ಟ್ರನೆನಿಸಿದನು ನಕ್ರ ದ್ರುಪದಾ
ಕ್ಷಿತಿಪರೀರ್ವರು ಹೂಹುಗಂಧರ್ವಾಹವವಾಯು-
ಯುತನಾಗಿ ಜನಿಸಿದನು ಹರಿಸೇವೆಗೆಂದು ಆ ನಮಿಪೆ ॥ ೫೯ ॥

ವೃಂದಾರಕರೊಳು ಗಾಯಕನೆನಿಪ ಹಾಹಾ ವಿವಹ-
ಗಂಧವಹನಾವೇಶಯುಗ್ವಿರಾಟಾ
ನಂದದಂಶಜಗರನು ವಿದ್ಯಾಧರ ಕಂಸನ
ತಂದೆಯೆನಿಪೋಗ್ರಸೇನನೆ ಉಗ್ರಸೇನನೆಂದಾನಮಿಪೆ ॥ ೬೦ ॥

ತಾಮರಸಭವಯುಕ್ತನಾದ ವಿಶ್ವಾವಸು ಯು-
ಧಾಮನ್ಯು ಉತ್ತಮೋಜ ಅರ್ಯಮ
ವ್ಯೋಮಮಣಿಯುಕ್ ಪರಾವಸು ಸುಸತ್ಯಜಿನ್ಮಿತ್ರ-
ನಾಮಕರ್ಕಾವಿಷ್ಟ ಚಿತ್ರಸೇನನಿಗೇ ಆ ನಮಿಪೆ ॥ ೬೧ ॥

ಬಲನೆಂಬ ಗಂಧರ್ವ ಮೊದಲಾದ ನೂರು ಗೋ-
ಕುಲದೊಳಗೆ ಗೋಪಾಲರೆನಿಸುತಿಹರು
ತಿಳಿವುದೂರ್ವಶಿ ಮುಖ್ಯ ಅಪ್ಸರಸರೊಳಗೆ ಪಿಂ-
ಗಳ ನಾಮ ಅಪ್ಸರಸ ಸ್ವೈರಂಧ್ರಿಯೆನಿಪಳೆಂದಾನಮಿಪೆ ॥ ೬೨ ॥

ನಕುಲನ ಲಲನೆ ಪಾರ್ವತಿ ತಿಲೋತ್ತಮಳು ಷ-
ಣ್ಮುಖಜನನಿಸಂಯುಕ್ತ ಅಭಿಮನ್ಯುನಾ
ಸಖಿ ಸುಭದ್ರಾ ತ್ರಿಜಟ ನಾಮಕಳು ಪೂರ್ವದಲಿ
ಅಕಳಂಕ ಗೋಪಿಕಾಸ್ತ್ರೀಯರು ಅಪ್ಸರಸರೆಂದೂ ಆ ನಮಿಪೆ ॥ ೬೩ ॥

ನೂರುಳಿದು ಶತಕೋಟಿ ಋಷಿಗಳುತ್ತಮರ ಬಿ-
ಟ್ಟೇರೆಂಟು ಸಾವಿರದ ನೂರೆನಿಸುವ
ಶೌರಿಸ್ತ್ರೀಯರು ರಮಾವೇಶಯುತರಗ್ನಿಗೆ ಕು-
ಮಾರಕರು ಪಾವಕಗೆ ಅಧಮರೆಂದೂ ಆ ನಮಿಪೆ ॥ ೬೪ ॥

ಇವರೊಳಧಿಕ ಕಶೇರು ತ್ವಷ್ಟ್ರನಾಮಕ ಸೂರ್ಯ-
ಕುವರಿ ಆಜಾನಜರು ಕರ್ಮಜರಿಗೇ
ಅಮರರೀರೈವತ್ತು ಗುಣದಿಂದ ಅಜಾನಜರಿಗೆ
ದಿವಿಜಕೃಶಾನುಸೂನುಗಳು ಸಮರೆಂದರಿದು ಆ ನಮಿಪೆ ॥ ೬೫ ॥

ಕೃಷ್ಣಾಂಗಸಂಗಗೋಪಿಯರಿಂದಲಿ ಭಕ್ತಿ-
ದ್ವ್ಯಷ್ಟಸಹಸ್ರಶತಸ್ತ್ರೀಯರೊಳಧಿಕಾ
ವಿಷ್ಣುಪತ್ನ್ಯಾವೇಶಬರಲು ಅಜಾನಜರಿಗೆ
ಶ್ರೇಷ್ಠರೆನಿಪರು ಹ್ರಾಸಕಾಲದಲಿ ಸಮರೆಂದೂ ಆ ನಮಿಪೆ ॥ ೬೬ ॥

ನಂದಗೇಹಿನಿ ಅಗ್ನಿಪುತ್ರರ್ಗೆ ಸಹಸ್ರಗುಣ-
ದಿಂದುತ್ತಮಳು ದೇವಕಿ ಯಶೋದಗೇ
ವಂದ್ಯಳೆನಿಪಳು ವಸುದೇವ ಉತ್ತಮ ಏಳು
ಮಂದಿಗಳನುಳಿದು ಚಿರಪಿತೃ ಶತಾಧಮರೆಂದು ಆ ನಮಿಪೆ ॥ ೬೭ ॥

ಸ್ವಮುಖಪ್ರೇರಿತ ದೇವಗಂಧರ್ವಗಣ ಶತಾ-
ಧಮ ಚಿರಪಿತೃಗಳಿಗೆ ನರಗಾಯಕಾ
ಸಮುದಾಯ ನೂರುಗಣ ಕ್ಷಿತಿಪರೀರೈವತ್ತು
ಸಮಿತಗುಣ ಮನುಜೋತ್ತಮರು ಶತಾವರರೆಂದು ಆ ನಮಿಪೆ ॥ ೬೮ ॥

ಪರಮಮುಖ್ಯಸುತಾತ್ತ್ವಿಕರು ಎನಿಪರೀ ಶನ್ಯೈ-
ಶ್ಚರನ ಪರಿಯಂತ ಧರಾಂತವಾಗೀ

ಕರೆಸುವರು ಮುಖ್ಯ ತಾತ್ತ್ವಿಕರೆಂದು ತಮ್ಮೊಳಗೆ
ಶರದಶಶತಸಾಹಸ್ರನಂತ ಗುಣದಿಂ ಕ್ರಮದಿ ಆ ನಮಿಪೆ ॥ ೬೯ ॥

ದೇವತಾಸ್ತ್ರೀಯರು ತಮ್ಮ ಪತಿಗಳಿಗೆ ದಶ ಗು-
ಣಾವರರು ಎನಿಪರು ಮುಕ್ತಿಯೊಳಾದರೂ
ಈ ವಿಧದಿ ನೀಚೋಚ್ಚಕ್ರಮವರಿತು ಭಜಿಪರಿಗೆ-
ಈವರಖಿಳಾರ್ಥಗಳ ಅಹಿಕಪಾರತ್ರಕದಲಿ ಆ ನಮಿಪೆ ॥ ೭೦ ॥

ಭಕ್ತಿವಿಜ್ಞಾನಬಲದೇವತಾಗಣಕಭಿ-
ವ್ಯಕ್ತಿ ತತ್ತದ್ಯೋಗ್ಯತಾನುಸಾರಾ
ಮುಕ್ತಿಪರಿಯಂತ ಭಗವದ್ರೂಪದರ್ಶನ ಪ್ರ-
ಯುಕ್ತ ಮಾಳ್ಪರು ಸಾಧನಗಳ ನಿಷ್ಕಾಮಕದಿ ಆ ನಮಿಪೆ ॥ ೭೧ ॥

ಪ್ರತಿದಿನಗಳಲ್ಲಿ ಸದ್ಭಕ್ತಿಪೂರ್ವಕ ತ್ರಿಸ-
ಪ್ತತಿಪದಾತ್ಮಕಬೃಹತ್ತಾರತಮ್ಯಾ
ಜಿತವಾಗಿ ಕಂಠಮಧ್ಯದಲಿ ಧರಿಸುವರ ಶಾ-
ಶ್ವತ ಕರುಣಿ ಸಂತೈಪ ಸರ್ವಕಾಲದಲೀ ॥ ೭೨ ॥

ಪುರುಷರೂಪನೆ ಕ್ಷರಾಕ್ಷರಪುರುಷಪೂಜ್ಯ ಸಮ-
ಚರಣಪಂಕಜಚಾರುಚರಿತ ಸ್ವರತಾ
ಕರುಣಾಕರೇಶ ಕಾಮಿತಕಲ್ಪತರು ಜನ್ಮ-
ಮರಣವಿವರ್ಜಿತ ಜಗನ್ನಾಥವಿಠ್ಠಲರಾಯಗಾನಮಿಪೆ ॥ ೭೩ ॥

॥ ದೇವರು ರಮಾದೇವೇರು ಬ್ರಹ್ಮವಾಯುಸರಸ್ವತಿ ಭಾರತಿ ಗರುಡಶೇಷರು ಸೌಪರ್ಣಿ ವಾರುಣಿ - ಪಾರ್ವತಿ ಇಂದ ಕಾಮ ಮೊದಲಾದವರ ಅವತಾರಾವೇಶಗಳಿಂದ ಯುಕ್ತವಾದ ಬೃಹತ್ತಾರತಮ್ಯ ಸಮಾಪ್ತಾ[೧] ॥

★★★★★

॥ ಇತಿ ಸ್ತೋತ್ರಮಾಲಿಕಾ - ೯ ॥

॥ ದೇವತಾತಾರತಮ್ಯಸ್ತೋತ್ರಮಾಲಿಕಾ ॥

॥ ಶ್ರೀಕೃಷ್ಣಾರ್ಪಣಮಸ್ತು ॥

ಸಮರ್ಪಿತಂ ಮಯಾ ಭವೇತ್ ಸುಮಧ್ವಸುತ್ತವಾಣಿನಾ ।
ರಮಾರಮೇಶಪಾದಯೋಃ ಪ್ರಭಂಜನಾಭಿಧಾಯುಜಾ ॥

★★★★★★

೧. ಇದು ಮಾನವಿಯ ಮೂಲಪ್ರತಿಯಲ್ಲಿ ಈ ಪದ್ಯದ ಕೊನೆಯಲ್ಲಿ ಕಂಡುಬರುವ ಉಲ್ಲೇಖ.

## ಡಾ. ವ್ಯಾಸನಕೆರೆ ಪ್ರಭಂಜನಾಚಾರ್ಯರ ಪ್ರವಚನಗಳ

### ಎಂ.ಪಿ.3. ಸಿ.ಡಿ./ಡಿ.ವಿ.ಡಿಗಳು

### ಎಂ. ಪಿ. ೩ ಸಿ. ಡಿ. ಗಳು

| ಸಿ.ಡಿ. ಗಳು | ಬೆಲೆ / ಅವಧಿ |
|---|---|
| 1. ಶ್ರೀಮದ್ಭಾಗವತ (ಪ್ರೋಷ್ಠಪದಿ) | ರೂ. 100 / 26 ಗಂ. |
| 2. ಶ್ರೀನಿವಾಸಕಲ್ಯಾಣ | ರೂ. 50 / 12 ಗಂ. |
| 3. ರಾಮಾಯಣ | ರೂ. 50 / 18 ಗಂ. |
| 4. ಸುಂದರಕಾಂಡ | ರೂ. 50 / 16 ಗಂ. |
| 5. ಮಹಾಭಾರತದಲ್ಲಿ ಅರ್ಜುನ ಮತ್ತು ಯುಧಿಷ್ಠಿರರ ಪಾತ್ರ | ರೂ. 60 / 16 ಗಂ. |
| 6. ಮಹಾಭಾರತದಲ್ಲಿ ಕರ್ಣನ ಪಾತ್ರ | ರೂ. 60 / 10 ಗಂ. |
| 7. ಮಹಾಭಾರತದಲ್ಲಿ ಭೀಷ್ಮ ಮತ್ತು ವಿದುರರ ಪಾತ್ರ | ರೂ. 60 / 18 ಗಂ. |
| 8. ಏಕಾದಶಿ-ದೇವರು-ಉಪನಯನ-ಗಾಯತ್ರಿ -ಲಕ್ಷ್ಮೀಶೋಭಾನೆ- ರಾಘವೇಂದ್ರಮಂಗಳಾಷ್ಟಕ | ರೂ. 50 / 8 ಗಂ. |
| 9. ಸುಮಧ್ವವಿಜಯ | ರೂ. 50 / 18 ಗಂ. |
| 10. ಚಾತುರ್ಮಾಸ್ಯ – ಧಾತ್ರೀಹವನ | ರೂ. 20 / 8 ಗಂ. |
| 11. ದ್ವಾದಶ ಸ್ತೋತ್ರ (ಪಾಠ) | ರೂ. 50 / 15 ಗಂ. |
| 12. ಸದಾಚಾರಸ್ಮೃತಿ | ರೂ. 20 / 3 ಗಂ. |
| 13. ಹರಿಕಥಾಮೃತಸಾರ (ಭಾಗ -1, 2) | ರೂ. 50 / 20 ಗಂ. |
| 14. ಹರಿವಂಶ | ರೂ. 50 / 10 ಗಂ. |
| 15. ಹರಿವಾಯುಸ್ತುತಿ (ಪಾಠ - ಪ್ರವಚನ) | ರೂ. 100 / 25 ಗಂ. |
| 16. ವಿಷ್ಣುಪುರಾಣ | ರೂ. 50 / 8 ಗಂ. |
| 17. ಗೀತಾಮಾಹಾತ್ಮ್ಯೆ | ರೂ. 50 / 15 ಗಂ. |
| 18. ಮಾಧ್ವಯತಿಗಳು ಮತ್ತು ಹರಿದಾಸರು | ರೂ. 50 / 15 ಗಂ. |
| 19. ಮಧ್ವ ಫಾರ್ ಯೂಥ್ (ಕಾರ್ಯಾಗಾರ) | ರೂ. 50 / 18 ಗಂ. |
| 20. ಸರ್ವಮೂಲ – ಪಾಠ | ರೂ.200 / 40 ಗಂ. |
| 21. ಮಹಾಭಾರತತಾತ್ಪರ್ಯನಿರ್ಣಯ (ಪ್ರವಚನ) | ರೂ. 150 / 40 ಗಂ. |
| 22. ಪ್ರಾತಃಸಂಕಲ್ಪಗದ್ಯ (ಪಾಠ) | ರೂ. 25 / 3 ಗಂ. |

### ಡಿ.ವಿ.ಡಿ (ಡಿ.ವಿ.ಡಿ ಪ್ಲೇಯರ್‌ನಲ್ಲಿ ಮಾತ್ರ)

| | |
|---|---|
| 1. ಸಮಗ್ರ ಭಾಗವತ (ಪಾಠ) | ರೂ. 1,000 / 4 ಡಿ.ವಿ.ಡಿ ಸೆಟ್ / 450 ಗಂ. |
| 2. ಮಹಾಭಾರತ (ಪ್ರವಚನ) | ರೂ. 400 / 150 ಗಂ. |
| 3. ಭಗವದ್ಗೀತೆ (ಪ್ರವಚನ) | ರೂ. 600 - 3 ಡಿ.ವಿ.ಡಿ. ಸೆಟ್ / 225 ಗಂ. |
| 4. ಭಾಗವತ ಸಾರೋದ್ಧಾರ (ಪಾಠ) | ರೂ. 150 / 70 ಗಂ. / 1 ಡಿ.ವಿ.ಡಿ. ಸೆಟ್ |
| 5. ಸಮಗ್ರ ಭಾಗವತ (ಪಾಠ) | ರೂ. 1,500 / 10 ಸಿ.ಡಿ. ಸೆಟ್ / 450 ಗಂ. |
| 6. ವಿಷ್ಣುತತ್ತ್ವನಿರ್ಣಯ (ಪಾಠ) | ರೂ. 300 |